No 331

M. Srishupal Shastri Avl.

ಶ್ರೀ

# ಜಂಬೂಸ್ವಾಮಿಚರಿತ

ಬೆಂಗಳೂರಿನ

ಶ್ರೀ ಕುಸುಮಮ್ಮನವರ

ಸ್ಮಾರಕವಾಗಿ

ಬೆಂಗಳೂರಿನ

ಶ್ರೀ ಬೊಮ್ಮಕ್ಕಮ್ಮನವರಿಂದ

ಪ್ರಕಾಶಿಸಲ್ಪಟ್ಟಿತು

1935

# ಮುನ್ನುಡಿ

ಬೆಂಗಳೂರಿನ ಜವಳಿ ಅಂಗಡಿ ಆರ್. ಬ್ರಹ್ಮಸೂರಯ್ಯನವರ ಸಹೋದರಿ ಶ್ರೀ ಕುಸುಮಮ್ಮನವರು ಧರ್ಮಕಾರ್ಯಕ್ಕೆ ಉಪಯೋಗಿಸಬೇಕೆಂದು ಅವರ ಅವಸಾನಕಾಲದಲ್ಲಿ ಬೆಂಗಳೂರಿನ ಧರ್ಮಪರಾಯಣೆ ಶ್ರೀ ಬೊಮ್ಮಕ್ಕಮ್ಮನವರಲ್ಲಿ ಕೊಟ್ಟಿದ್ದ ಧರ್ಮದ್ರವ್ಯದಿಂದ ಇವರು ಈ ಪುಸ್ತಕವನ್ನು ಮುದ್ರಣ ಮಾಡಿಸಿರುತ್ತಾರೆ.

ಶ್ರೀ ಕುಸುಮಮ್ಮನವರಿಗೆ ಶಾಸ್ತ್ರಪಠನ ಶ್ರವಣಗಳಲ್ಲಿ ತುಂಬ ಆಸಕ್ತಿಯಿದ್ದಿತೆಂದು ಅವರ ಸ್ಮಾರಕವಾಗಿ ಈ ಪುಣ್ಯಚರಿತವನ್ನು ಶಾಸ್ತ್ರದಾನಕ್ಕೋಸ್ಕರ ಶ್ರೀ ಬೊಮ್ಮಕ್ಕಮ್ಮನವರು ಆರಿಸಿರುವುದು ಉಚಿತವಾಗಿರುತ್ತದೆ.

ಈ ಅವಸರ್ಪಿಣೀಕಾಲದಲ್ಲಿ ಕೊನೆಯ ಕೇವಲಿಗಳಾಗಿ ಮುಕ್ತರಾದ ಶ್ರೀ ಜಂಬೂಸ್ವಾಮಿಯ ಈ ಚರಿತವು ಸಂಸ್ಕೃತದಿಂದ ಹಿಂದೀ ಭಾಷೆಗೆ ಶ್ರೀ ದೀಪಚಂದ್ ವರ್ಣಿಯವರಿಂದ ಅನುವಾದಿತವಾಗಿ ಮೂರಾವರ್ತಿ ಮುದ್ರಿತವಾಗಿದ್ದಿತೆಂದು ಅವರ ಮುನ್ನುಡಿಯಿಂದ ತಿಳಿದು ಬರುವುದು. ಇದು ಆ ಹಿಂದೀ ಪುಸ್ತಕದ ಅನುವಾದ.

ಮೈಸೂರು　　　　　　　　　　　　ಅನುವಾದಕ,

೨೦—೫—೧೯೩೫　　　　　　　ಎ. ಶಾಂತಿರಾಜಶಾಸ್ತ್ರಿ.




|| ಶ್ರೀ ||

ಪರಮಾತ್ಮನೇ ನಮಃ

# ಶ್ರೀ ಜಂಬೂಸ್ವಾಮಿಚರಿತ್ರೆ



ಈ ಭರತಕ್ಷೇತ್ರದ ಆರ್ಯಾಖಂಡದ ಮಗಧದೇಶದಲ್ಲಿ ರಾಜಗೃಹವೆಂಬ ನಗರವಿರುತ್ತದೆ. ಅದರ ಸಮೀಪದಲ್ಲಿ ಉದಯಗಿರಿ, ಸೋನಾಗಿರಿ, ಖಂಡಗಿರಿ, ರತ್ನಗಿರಿ, ವಿಪುಲಾಚಲಗಳೆಂಬ ಐದು ಪರ್ವತಗಳಿರುತ್ತವೆ. ಅವುಗಳಿಂದ ರಾಜಗೃಹನಗರವು ಬಹು ಮನೋಹರವಾಗಿದೆ.

ಈಗ್ಗೆ ಸುಮಾರು ಎರಡು ಸಾವಿರದ ನಾಲ್ಕುನೂರ ಅರುವತ್ತು ವರುಷಗಳ ಹಿಂದೆ ಈ ರಾಜಗೃಹನಗರದಲ್ಲಿ ಶ್ರೇಣಿಕಮಹಾಮಂಡಲೇಶ್ವರನು ರಾಜ್ಯವಾಳುತ್ತ ಬಂದಾನೊಂದು ದಿವಸ ಒಡ್ಡೋಲಗದಲ್ಲಿರುವಾಗ ಆಸ್ಥಾನಕ್ಕೆ ವನಪಾಲಕನು ಬಂದು ಅಕಾಲಫಲಪುಷ್ಪಗಳನ್ನು ರಾಜನಿಗೆ ಕೈಗಾಣಿಕೆಯಿತ್ತು ವಿನಯಪೂರ್ವಕವಾಗಿ ವಂದಿಸಿ "ಮಹಾಪ್ರಭೋ! ವಿಪುಲಾಚಲ-ಪರ್ವತದ ಮೇಲೆ ಶ್ರೀ ಮಹಾವೀರತೀರ್ಥಂಕರರ ಸಮವಸರಣವು ಬಂದು ವಿರಾಜಮಾನವಾಗಿದೆ. ಅದರ ಪ್ರಭಾವದಿಂದ ತಮ್ಮ ಉದ್ಯಾನ-ವನದಲ್ಲಿ ಈ ಅಕಾಲಫಲಪುಷ್ಪಗಳುಂಟಾಗಿರುತ್ತವೆ. ಕೆರೆ ಬಾವಿಗಳೆಲ್ಲ ಜಲಭರಿತಗಳಾಗಿವೆ" ಎಂದು ನಿವೇದಿಸಿದನು. ಆ ಮಾತನ್ನು ಕೇಳಿ ರಾಜನು ಬಹುಸಂತುಷ್ಟನಾಗಿ ಸಿಂಹಾಸನದಿಂದಿಳಿದು ಸಪ್ತಪರಮಸ್ಥಾನಗಳ ಭಾವನೆಯಿಂದ ಏಳು ಹಜ್ಜೆ ಮುಂದೆ ನಡೆದು ಶ್ರೀ ಮಹಾವೀರಸ್ವಾಮಿಗೆ ಪರೋಕ್ಷವಂದನೆಯನ್ನು ಮಾಡಿ ಬಳಿಕ ರಾಜಚಿಹ್ನೆಗಳ ಹೊರತಾಗಿ ಉಳಿದ ವಸ್ತ್ರಾಭರಣಗಳನ್ನು ತೆಗೆದು ಆ ವ

ಪಾಲಕನಿಗೆ ಬಹುಮಾನ ಕೊಟ್ಟು ನಗರದಲ್ಲಿ ಆನಂದಭೇರಿಯನ್ನು ಹೊಯ್ಸಿ ಆ ಮೂಲಕ ವಿಪುಲಾಚಲಪರ್ವತದ ಮೇಲೆ ಮಹಾವೀರಸ್ವಾಮಿಯ ಸಮವಸರಣವು ಬಂದಿರುವುದೆಂದೂ ನಗರದ ಸ್ತ್ರೀಪುರುಷರೆಲ್ಲ ಸ್ವಾಮಿಯ ವಂದನೆಗೆ ಹೊರಡಬೇಕೆಂದೂ ಘೋಷಿಸಿದನು. ಆ ಘೋಷಣೆಯನ್ನು ಕೇಳಿ ಪುರಜನರು ಬಹುಸಂತುಷ್ಟರಾಗಿ ತಮ್ಮ ಶಕ್ತ್ಯನುಸಾರ ಅಷ್ಟವಿಧಾರ್ಚನಾವಸ್ತುಗಳನ್ನು ತೆಗೆದುಕೊಂಡು ವಂದನೆಗೆ ಹೊರಟರು. ಆಗ ಶ್ರೇಣಿಕಮಹಾಮಂಡಲೇಶ್ವರನೂ ಸಕಲ ಪುರಜನ ಪರಿಜನ ಸಹಿತನಾಗಿ ರಥಾರೂಢನಾಗಿ, ಇಂದ್ರನಂತೆ ವೈಭವದಿಂದ ಹೊರಟು ಹೋಗಿ ಸ್ವಾಮಿಯ ಸಮವಸರಣವನ್ನು ಕಂಡೊಡನೆ ಅವನೂ ಎಲ್ಲರೂ ತಂತಮ್ಮ ವಾಹನಗಳಿಂದಿಳಿದು ಪಾದಚಾರಿಗಳಾಗಿ ನಡೆದು ಹೋಗಿ ಸಮವಸರಣದೊಳಕ್ಕೆ ಪ್ರವೇಶಿಸಿ ತ್ರಿಪ್ರದಕ್ಷಿಣೆಯನ್ನು ಮಾಡಿ ಶ್ರೀ ಮಹಾವೀರಸ್ವಾಮಿಗೆ ನಮಸ್ಕಾರವನ್ನು ಮಾಡಿ ಭಕ್ತಿಭಾವದಿಂದ ಪೂಜಿಸಿ ಉಚಿತಸ್ಥಾನದಲ್ಲಿ—ಮನುಷ್ಯಕೋಷ್ಠದಲ್ಲಿ ಕುಳಿತರು. ಬಳಿಕ ಶ್ರೇಣಿಕಮಹಾಮಂಡಲೇಶ್ವರನು ಎದ್ದು ಕೈಗಳನ್ನು ಮುಗಿದು "ಎಲೈ ಸ್ವಾಮಿಯೆ! ದಯೆಯಿಟ್ಟು ನನಗೆ ಭವಸಾಗರದಿಂದ ಪಾರವನ್ನು ಹೊಂದಿಸತಕ್ಕ ಧರ್ಮದ ಉಪದೇಶವನ್ನು ಮಾಡಿ" ಎಂದು ಪ್ರಾರ್ಥಿಸಿಕೊಂಡನು. ಆಗ ಮಹಾವೀರಸ್ವಾಮಿಯ ದಿವ್ಯಧ್ವನಿಯು ಹೊರಟಿತು. ಅದನ್ನನುಸರಿಸಿ ಶ್ರೀ ಗೌತಮಗಣಧರರು ಈ ಕೆಳಗೆ ಹೇಳುವಂತೆ ಶ್ರೇಣಿಕನಿಗೆ ಧರ್ಮೋಪದೇಶವನ್ನು ಮಾಡಿದರು.

"ಎಲೈ ರಾಜನೇ! ಕೇಳು—ಅನಾದಿಯಾದ ಈ ಸಂಸಾರದಲ್ಲಿ ಜೀವವು ಅನಾದಿಕರ್ಮಪ್ರವಾಹಪರವಶವಾಗಿ ನರಕತಿರ್ಯಙ್ಮನುಷ್ಯದೇವಗತಿಗಳಲ್ಲಿ ತಿರುತಿರುಗಿ ಜನನ ಮರಣ ಆಧಿ ವ್ಯಾಧಿ ದುಃಖಗಳನ್ನನುಭವಿಸುತ್ತಿರುವುದು. ಈ ಜೀವವು ಶರೀರಾದಿ ಪರವಸ್ತುಗಳೇ ತಾನೆಂದು ಭ್ರಮಿಸಿ ತನ್ನನ್ನು ತಾನು ಮರೆತು ತನ್ನ ಅವಿನಾಶಿಯಾದ ಜ್ಞಾನಸುಖಾ

ದಿಸಂಪತ್ತಿಯನ್ನು ಅನುಭವಿಸದೆ ಇಂದ್ರಿಯವಿಷಯುಗಳಲ್ಲಿ ಆಸಕ್ತವಾಗಿ ಅವುಗಳಿಂದ ಸುಖವನ್ನು ಹೊಂದಲಿಚ್ಛಿಸುತ್ತದೆ. ಆದರೆ ಆಶೆಯೆಂಬ ಅಗ್ನಿಯು ಪ್ರಜ್ವಲಿಸುತ್ತಿರುವಾಗ ಭೋಗಸಾಮಗ್ರಿಗಳೆಂಬ ಕಟ್ಟಿಗೆಗಳಿಂದ ತೃಪ್ತಿಯೆಲ್ಲಿಬಂದಿತು ? ವಿಷಯಭೋಗಸಾಮಗ್ರಿಯು ಹೆಚ್ಚಿದಹಾಗೆಲ್ಲ ವಿಷಯಭೋಗಾಭಿಲಾಷೆಯೂ ಹೆಚ್ಚುತ್ತಿರುವುದು. ಮೂರು ಲೋಕವು ಸಿಕ್ಕಿದರೂ ಈ ಜೀವದ ಆಶೆಯೆಂಬ ಹೊಂಡವು ತುಂಬದು. ಹೀಗೆ ಪ್ರತಿಯೊಂದು ಸಂಸಾರಿಜೀವಕ್ಕೂ ಆಶೆಯಿರುವುದು. ಜೀವಗಳು ಅನಂತಾನಂತಗಳಿರುತ್ತವೆ. ಹೀಗಿರುವಾಗ ಈ ಸಂಸಾರದಲ್ಲಿ ಸುಖವನ್ನು ದೊರಕಿಸುವುದೆಂಬುದು ಕಲ್ಲಿನಲ್ಲಿ ಕಮಲವನ್ನು ಬೆಳೆಯಿಸಿದಂತೆಯೇ ಸರಿ. ಸಂಸಾರವು ದುಃಖಮಯವಾಗಿದೆ. ಇದರಲ್ಲಿ ಸ್ವಲ್ಪವೂ ಸುಖವಿಲ್ಲ. ಇದರಲ್ಲಿ ಸುಖವನ್ನು ದೊರಕಿಸಬೇಕೆಂಬ ಪ್ರಯತ್ನವು ನೀರನ್ನು ಕಡೆದು ಬೆಣ್ಣೆಯನ್ನು ದೊರಕಿಸಬೇಕೆಂಬ ಪ್ರಯತ್ನದಂತೆಯೂ ಮರಳನ್ನು ಗಾಣವಾಡಿ ಎಣ್ಣೆಯನ್ನು ದೊರಕಿಸಬೇಕೆಂಬ ಪ್ರಯತ್ನದಂತೆಯೂ ನಿಷ್ಫಲವಾಗುವುದು. ಆದುದರಿಂದ ಸುಖವನ್ನು ಬಯಸುವವರು ಈ ಸಂಸಾರ ಭೋಗಾಭಿಲಾಷೆಯನ್ನು ತೊರೆದು ಧರ್ಮವನ್ನು ಪರಿಗ್ರಹಿಸಬೇಕು. ಆ ಧರ್ಮವು ಗೃಹಸ್ಥಧರ್ಮವೆಂದೂ ಯತಿಧರ್ಮವೆಂದೂ ಎರಡು ಪ್ರಕಾರವಾಗಿರುತ್ತದೆ. ಅಹಿಂಸಾ ಸತ್ಯ ಅಚೌರ್ಯ ಸ್ವದಾರಸಂತೋಷ ಪರಿಮಿತಪರಿಗ್ರಹ ಈ ಐದು ಅಣುವ್ರತಗಳು. ಮದ್ಯಮಾಂಸಮಧುತ್ಯಾಗ ದಿಗ್ವ್ರತ ಅನರ್ಥದಂಡವ್ರತ ಭೋಗೋಪಭೋಗಪರಿಮಾಣವ್ರತ ಈ ಮೂರು ಗುಣವ್ರತಗಳು. ದೇಶಾವಕಾಶಿಕ ಸಾಮಾಯಿಕ ಪ್ರೋಷಧೋಪವಾಸ ವೈಯಾವೃತ್ಯ ಈ ನಾಲ್ಕು ಶಿಕ್ಷಾವ್ರತಗಳು. ಇವುಗಳೆಲ್ಲ ಗೃಹಸ್ಥಧರ್ಮದ ಭೇದಗಳು. ಇವುಗಳನ್ನು ಅತಿಚಾರವಿಲ್ಲದೆ ಪರಿಪಾಲಿಸಿದರೆ ಕ್ರಮೇಣ ಭವಬಂಧನವು ತಪ್ಪಿ ಮುಕ್ತಿಯಾಗುವುದು. ಈ ಗೃಹಸ್ಥಧರ್ಮವು ಮುಕ್ತಿಗೆ ಪರಂಪರಾಸಾಧನವಾಗಿರುವುದು.

ಮೇಲೆ ಹೇಳಲ್ಪಟ್ಟ ಅಹಿಂಸಾದಿವ್ರತಗಳನ್ನು ಸಂಪೂರ್ಣವಾಗಿ ಪರಿಪಾಲಿಸಿದರೆ ಅವುಗಳೇ ಮಹಾವ್ರತಗಳೆನ್ನಿಸುವುವು. ಅವುಗಳ ಪಾಲನೆಯೇ ಯತಿಧರ್ಮವಾಗಿರುತ್ತದೆ. ಈ ಯತಿಧರ್ಮಕ್ಕೆ ಅನಗಾರಧರ್ಮವೆಂದೂ ಮಹಾವ್ರತವೆಂದೂ ಸಕಲಚಾರಿತ್ರವೆಂದೂ ಹೆಸರುಗಳಿರುತ್ತವೆ. ಈ ಯತಿಧರ್ಮವು ಮುಕ್ತಿಗೆ ಸಾಕ್ಷಾತ್ ಸಾಧನವಾಗಿರುವುದು.''

ಈ ಪ್ರಕಾರವಾಗಿ ಶ್ರೀ ಗೌತಮಗಣಧರರು ಶ್ರೇಣಿಕಮಹಾಮಂಡಲೇಶ್ವರನಿಗೆ ಸಂಸಾರಪರಿಸ್ಥಿತಿಯನ್ನೂ ಧರ್ಮಸ್ವರೂಪವನ್ನೂ ಬೋಧಿಸಿದುದನ್ನು ಕೇಳಿ ಅವನು ಬಹು ಸಂತುಷ್ಟನಾದನು. ಅಷ್ಟರಲ್ಲಿ ಓರ್ವ ದೇವನು ಬಂದು ಸ್ವಾಮಿಗೆ ನಮಸ್ಕಾರವನ್ನು ಮಾಡಿ ತನಗೆ ಉಚಿತವಾದ ಸ್ಥಾನದಲ್ಲಿ ಕುಳಿತುಕೊಂಡನು. ಆ ದೇವನ ಅಪೂರ್ವವಾದ ದೇಹಕಾಂತಿಯನ್ನು ನೋಡಿ ಶ್ರೇಣಿಕಮಹಾರಾಜನು ಆಶ್ಚರ್ಯಪರವಶನಾಗಿ ಗೌತಮಗಣನಾಯಕರನ್ನು ಕುರಿತು ''ಸ್ವಾಮಿಯೆ, ಈ ದೇವನಾರು?'' ಎಂದು ಕೇಳಿದನು. ಅದಕ್ಕೆ ಗೌತಮಸ್ವಾಮಿಯವರು ''ಇವನು ವಿದ್ಯುನ್ಮಾಲಿಯೆಂಬ ದೇವನು. ಈತನ ಆಯುಷ್ಯವು ಇನ್ನು ಮೂರು ದಿವಸ ಉಳಿದಿದೆ'' ಎಂದರು. ಆ ಮಾತನ್ನು ಕೇಳಿ ಶ್ರೇಣಿಕಮಹಾರಾಜನು ಗೌತಮಗಣಧರರನ್ನು ಕುರಿತು ''ಸ್ವಾಮಿಯೇ, ದೇವತೆಗಳ ಆಯುಷ್ಯವು ಆರು ತಿಂಗಳು ಉಳಿದಿರುವಾಗ ಅವರು ಕಾಂತಿಹೀನರಾಗುವರೆಂದೂ ಕಂಠಮಾಲಿಕೆಯು ಬಾಡುವುದೆಂದೂ ಹೇಳಲಾಗಿದೆ. ಈ ದೇವನ ಆಯುಷ್ಯವು ಮೂರು ದಿವಸ ಉಳಿದಿದ್ದರೂ ಇವನ ದೇಹಕಾಂತಿಯು ಅಸದೃಶವಾಗಿರುತ್ತದೆ. ಕೃಪಾನಿಧೆ! ಇದರ ಕಾರಣವನ್ನು ನಿರೂಪಿಸಬೇಕು'' ಎಂದನು. ಆಗ ಗೌತಮಗಣಧರರು ಈ ಕೆಳಗೆ ಹೇಳುವಂತೆ ಉತ್ತರವನ್ನು ದಯೆಪಾಲಿಸಿದರು:—

''ಎಲೈ ರಾಜನೆ! ಕೇಳು. ಇದೇ ನಾಡಿನಲ್ಲಿ ವರ್ಧಮಾನಪುರವೆಂಬುದೊಂದು ಸುಂದರವಾದ ನಗರವಿದೆ. ಆ ನಗರದಲ್ಲಿ ಧರ್ಮಾತ್ಮನೂ

ನ್ಯಾಯನೀತಿನಿಪುಣನೂ ಆದ ಮಹೀಪಾಲನೆಂಬ ದೊರೆಯು ದೊರೆತನವನ್ನು ಮಾಡಿಕೊಂಡಿದ್ದನು. ಆ ನಗರದಲ್ಲಿ ಮಹಾಮಿಥ್ಯಾದೃಷ್ಟಿಯಾದ ಬ್ರಾಹ್ಮಣನೋರ್ವನು ಜನಗಳಿಗೆ ಯಾವಾಗಲೂ ಮಿಥ್ಯೋಪದೇಶಗಳನ್ನು ಮಾಡುತ್ತ ಉಪನಯನ ವಿವಾಹ ಮೊದಲಾದ ಕಾರ್ಯಗಳಿಂದ ತನ್ನ ಜೀವನನಿರ್ವಾಹವನ್ನು ಮಾಡಿಕೊಂಡಿದ್ದನು. ಅವನಿಗೆ ಭಾವದೇವ ಭವದೇವ ಎಂಬೀರ್ವರು ವಿದ್ಯಾನಿಪುಣರಾದ ಮಕ್ಕಳಿದ್ದರು. ತಂದೆಯಂತೆ ಅವರೂ ಮಿಥ್ಯಾದೃಷ್ಟಿಗಳಾಗಿದ್ದರು. ಕೆಲವು ಕಾಲದನಂತರ ಆ ಬ್ರಾಹ್ಮಣನು ಸತ್ತು ತನ್ನ ಕರ್ಮಾನುಸಾರವಾಗಿ ದುರ್ಗತಿಯನ್ನು ಹೊಂದಿದನು. ಇತ್ತ ಆ ಮಕ್ಕಳೀರ್ವರೂ ತಂದೆಯ ವೃತ್ತಿಯನ್ನೇ ಅವಲಂಬಿಸಿ ಕಾಲಕ್ಷೇಪವನ್ನು ಮಾಡಿಕೊಂಡಿದ್ದರು.

ಒಂದಾನೊಂದು ದಿವಸ ಮಹಾತಪಸ್ವಿಗಳಾದ ಓರ್ವ ನಿರ್ಗ್ರಂಥ ಮುನಿಗಳು ವಿಹರಿಸುತ್ತ ಆ ನಗರದ ಉದ್ಯಾನಕ್ಕೆ ಬಂದರು. ಅವರ ದರ್ಶನ ಮತ್ತು ವಂದನೆಗಾಗಿ ಪುರನಿವಾಸಿಗಳೂ ಆ ಬ್ರಾಹ್ಮಣಪುತ್ರರೂ ಹೋಗಿ ಮುನಿಗಳಿಗೆ ವಂದಿಸಿ ಅವರಿಂದ ಧರ್ಮೋಪದೇಶವನ್ನು ಕೇಳಿದರು. ಬಳಿಕ ಅನೇಕರು ತಂತಮ್ಮ ಶಕ್ತ್ಯನುಸಾರವಾಗಿ ವ್ರತಗಳನ್ನು ಸ್ವೀಕರಿಸಿದರು. ಆ ಬ್ರಾಹ್ಮಣಪುತ್ರರಲ್ಲಿ ದೊಡ್ಡವನಾದ ಭಾವದೇವನು ಸಂಸಾರಸ್ವರೂಪವನ್ನು ಕೇಳಿ ವಿಷಯಭೋಗಗಳಿಂದ ವಿರಕ್ತನಾಗಿ “ ಈ ಸಮಯವು ತಪ್ಪಿದರೆ ಮತ್ತೆ ಸಿಕ್ಕದು. ಯಮನು ಅಕಸ್ಮಾತ್ ಬಂದು ನುಂಗಿಬಿಡುವನು. ಆ ಮೇಲೆ ಎಲ್ಲಾ ವಿಚಾರಗಳೂ ಇಲ್ಲೇ ಉಳಿಯುವುವು. ಲೋಕದಲ್ಲಿ ಎಲ್ಲರೂ ಸ್ವಾರ್ಥತೆಯ ಉಪಾಸಕರು. ಲೋಕದಲ್ಲಿ ಯಾರಾದರೂ ಹಿತಚಿಂತಕರಿರುವುದಾದರೆ ಭವಸಾಗರದಲ್ಲಿ ಮುಳುಗುತ್ತಿರುವ ನಮ್ಮಗಳಿಗೆ, ಸ್ವಪ್ರಯೋಜನವೇನೂ ಇಲ್ಲದೆ, ಹಸ್ತಾವಲಂಬನವನ್ನು ಕೊಟ್ಟು ಪಾರವನ್ನು ಹೊಂದಿಸುವವನಾದ ಈ ಗುರುವಲ್ಲದೆ ಮತ್ತಾರೂ ಇಲ್ಲ. ಸಮಸ್ತವಸ್ತುಗಳೂ ಕ್ಷಣಭಂಗುರಗಳಾಗಿರುತ್ತವೆ.

ನಮ್ಮ ಶರೀರವೇ ನಾಶಶೀಲವಾದುದೆಂದಮೇಲೆ ಇದಕ್ಕೆ ಸಂಬಂಧಪಟ್ಟ ಪದಾರ್ಥಗಳು ಅವಶ್ಯವಾಗಿಯೂ ನಾಶವಾಗತಕ್ಕುವುಗಳೇ. ಆದುದ ರಿಂದ ಈ ಸಮಯವನ್ನು ಬಿಡಬಾರದು" ಎಂದು ವಿಚಾರ ಮಾಡಿ ಆ ಮುನೀಶ್ವರರ ಬಳಿಯಲ್ಲಿ ಜಿನದೀಕ್ಷೆಯನ್ನು ತೆಗೆದುಕೊಂಡನು. "ಕಾಲಾ ಯುಸಂ ಹಿ ಕಲ್ಯಾಣಂ ಕಲ್ಪತೇ ರಸಯೋಗತಃ"—ಸಿದ್ಧರಸದ ಸಂಬಂಧ ದಿಂದ ಕಬ್ಬಿಣವು ಭಂಗಾರವಾಗುವುದು. ಅದರಂತೆ ಮಿಥ್ಯಾದೃಷ್ಟಿ ಯಾಗಿದ್ದ ಆ ಭಾವದೇವಬ್ರಾಹ್ಮಣನು ಮುನಿಸಂಸರ್ಗದಿಂದ ಸನ್ಮಾರ್ಗ ಗಾಮಿಯಾದನು. ಅವನು ತನ್ನ ಗುರುವಿನೊಡನೆಯೂ ಮುನಿಸಂಘ ದೊಡನೆಯೂ ಹನ್ನೆರಡು ವರುಷಗಳ ವರೆಗೆ ಅನೇಕ ದೇಶಗಳಲ್ಲಿ ವಿಹರಿಸಿ ಬಳಿಕ ಒಂದು ದಿನ ಆ ವರ್ಧಮಾನನಗರದ ಉದ್ಯಾನಕ್ಕೆ ಗುರುವಿನೊಡನೆ ಬಂದನು. ಒಂದು ದಿವಸ ತನ್ನ ಮನಸ್ಸಿನಲ್ಲಿ "ನನ್ನ ತಮ್ಮನಾದ ಭವದೇವನು ತೀವ್ರಮಿಥ್ಯಾದೃಷ್ಟಿಯಾಗಿದ್ದಾನೆ. ಅವನಿಗೆ ಉಪದೇಶ ಮಾಡಿ ಹೇಗಾದರೂ ಸನ್ಮಾರ್ಗಕ್ಕೆ ತರಬೇಕು" ಎಂದು ಯೋಚಿಸಿ ಗುರುವಿನ ಆಜ್ಞೆಯನ್ನು ಪಡೆದು ನಗರಕ್ಕೆ ಪ್ರವೇಶಿಸಿ ತನ ತಮ್ಮನ ಮನೆಗೆ ಹೋದನು. ಭವದೇವನು ತನ್ನ ಅಣ್ಣನು ಮನೆಗೆ ಬಂದುದನ್ನು ನೋಡಿ ಬಹು ಸಂತುಷ್ಟನಾಗಿ ಅವನಿಗೆ ಉನ್ನತಾಸನವನ್ನು ಕೊಟ್ಟು ಕುಳ್ಳಿರಿಸಿ ವಂದಿಸಿ ಕುಶಲಪ್ರಶ್ನೆಯನ್ನು ಮಾಡಿದನು. ಆಗ ಭಾವದೇವಮುನಿಯು "ಧರ್ಮಲಾಭೋಸ್ತು" ಎಂದು ಆಶೀರ್ವದಿಸಿ "ಕರ್ಮವನ್ನು ಜಯಿಸಿದ ಜಿನೇಶ್ವರನ ಪಾದಪದ್ಮಗಳಲ್ಲಿ ಭಕ್ತಿಯುಳ್ಳವ ರಿಗೆ ಯಾವಾಗಲೂ ಕುಶಲವೇ" ಎಂದು ಉತ್ತರವನ್ನಿತ್ತನು. ತರುವಾ ಯ ಮುನಿಯು ಭವದೇವನ ಮನೆಯು ಅಲಂಕೃತವಾಗಿರುವುದನ್ನೂ ಮಂಗಲಗಾನವನ್ನು ಮಾಡುತ್ತಿದ್ದ ಸ್ತ್ರೀಯನ್ನೂ ನೋಡಿ "ಇದೆಲ್ಲ ಏನು?" ಎಂದು ಕೇಳಿದನು. ಆಗ ಭವದೇವನು "ಕಳೆದ ರಾತ್ರಿಯಲ್ಲಿ ನನ್ನ ವಿವಾಹವಾಯ್ತು. ಆ ಸಂಬಂಧವಾದ ಉತ್ಸವವಿದು" ಎಂದನು.

ಆ ಮಾತನ್ನು ಕೇಳಿ ಭಾವದೇವಮುನಿಯು "ಇದೆಲ್ಲ ಕರ್ಮದ ಜಂಜಾಟ; ನಿನಗೆ ಧರ್ಮದ ಕಡೆಗೇನಾದರೂ ಲಕ್ಷ್ಯವಿದೆಯೇ ?" ಎಂದು ಕೇಳಿದನು. ಆ ಮಾತನ್ನು ಕೇಳಿ ಭವದೇವನು ಆ ಮುನಿಯ ಬಳಿಯಲ್ಲಿ ಅಹಿಂಸಾ ಸತ್ಯ ಅಚೌರ್ಯ ಸ್ವದಾರಸಂತೋಷ ಪರಿಮಿತಪರಿಗ್ರಹಗಳೆಂಬ ಪಂಚಾಣು ವ್ರತಗಳನ್ನು ಕೈಕೊಂಡನು. ಬಳಿಕ ಮುನಿಯು ಹೊರಟು ಪ್ರಾಣಿಹಿಂಸೆ ಯಾದೀತೆಂದು ಮಾರುದ್ದದಷ್ಟು ಭೂಮಿಯನ್ನು ನೋಡುತ್ತ—ಈರ್ಯಾ ಪಥಶುದ್ಧಿಯಿಂದ ಧರ್ಮಧ್ಯಾನದಲ್ಲಿ ಲೀನನಾಗಿ ಹೋಗುತ್ತಿದ್ದನು. ಅವನನ್ನು ಕಳುಹುವುದಕ್ಕಾಗಿ ಭವದೇವನು ಹಿಂಬಾಲಿಸಿ ಹೋದನಾದರೂ ಅಣ್ಣನು ಯಾವಾಗ ತನ್ನನ್ನು ಹಿಂದಿರುಗಿ ಹೋಗುವಂತೆ ಹೇಳುವನೆಂದೂ ತಾನು ಮನೆಗೆ ಹೋಗಿ ನವೋಢಳಾದ ಪತ್ನಿಯೊಡನೆ ಯಾವಾಗ ಸೇರುವೆನೆಂದೂ ಮನಸ್ಸಿನಲ್ಲಿ ಯೋಚಿಸುತ್ತಿದ್ದನು. ಹೀಗೆ ಅವರೀರ್ವರೂ ತಂತಮ್ಮ ಯೋಚನಾರೂಢರಾಗಿ ನಡೆದು ನಗರದಿಂದ ಸುಮಾರು ಒಂದು ಹರದಾರಿಯ ದೂರದ ವರೆಗೆ ಹೋದರು. ಆದರೂ ಭವದೇವನು ಹಿಂದಿರುಗುವಂತೆ ಮುನಿಯು ಹೇಳಲಿಲ್ಲ. ಆಗ ಭವದೇವನು "ಒಂದು ಹರದಾರಿಯ ದೂರದ ವರೆಗೆ ಬಂದುದಾಯ್ತು. ಅಣ್ಣನು ಇನ್ನೆಷ್ಟು ದೂರ ಹೋಗುವನೋ ತಿಳಿಯೆನಲ್ಲಾ, ನಾನು ಹಿಂದಿರುಗಲು ಸಮ್ಮತಿಸಿದ್ದರೆ ಮನೆಗೆ ಹೋಗುತ್ತಿದ್ದೆನು. ಮುಂದೆ ಹೋಗಿಯೂ ನಾನು ಹಿಂದಿರುಗುವುದಕ್ಕೆ ಬಿಡುವನೋ ಇಲ್ಲವೋ ಯಾರು ಬಲ್ಲರು?" ಎಂದು ಮನಸ್ಸಿನಲ್ಲಿ ವಿಚಾರ ಮಾಡುತ್ತಿದ್ದನು. ಮುನಿಯಾದರೋ ಭವದೇವನನ್ನು ಕುರಿತು ತನ್ನ ಜತೆಯಲ್ಲಿ ಬರುವಂತಾಗಲಿ ಹಿಂದಿರುಗಿ ಹೋಗುವಂತಾಗಲಿ ಹೇಳುತ್ತಿರಲಿಲ್ಲ- ಮುನಿಯು ಮೌನದಿಂದ ಹೋಗುತ್ತ "ಭವದೇವನು ನಮ್ಮ ಗುರುಗಳ ಬಳಿಗೆ ಬಂದು ಈ ಅಸಾರಸಂಸಾರವನ್ನು ಪರಿತ್ಯಜಿಸಿದರೆ ಚೆನ್ನಾಗಿರುವುದು. ಇವನು ಮಿಥ್ಯಾತ್ವವಶವರ್ತಿಯಾಗಿ ಅಶುಭಕರ್ಮದಿಂದ ಬದ್ಧನಾಗಿದ್ದಾನೆ. ಜೈನತಪಶ್ಚರಣ

ದಿಂದ ಆ ಕರ್ಮಬಂಧನವು ಬಿಡುಗಡೆಯಾದರೆ ಇವನು ಉತ್ತಮಸುಖ ಭಾಗಿಯಾಗುವನು " ಎಂದು ಮನಸ್ಸಿನಲ್ಲಿ ಯೋಚಿಸುತ್ತಿದ್ದನು. ಇದ ಲ್ಲವೇ ನಿಜವಾದ ಸಹೋದರಪ್ರೇಮ? ಭವಸಾಗರದಲ್ಲಿ ಮುಳುಮು ಳುಗಿ ದುಃಖಕ್ಕೀಡಾಗುವ ಸಹೋದರರನ್ನು ಎತ್ತಿ ಉತ್ತಮಸುಖದಾ ಯಕವಾದ ಸನ್ಮಾರ್ಗದಲ್ಲಿರಿಸುವವರು ಲೋಕದಲ್ಲಿ ಬಹುವಿರಳ. ವಿಷಯ ಭೋಗಗಳಲ್ಲಿ ಸಿಕ್ಕಿಸಿ ಭವಸಮುದ್ರಕ್ಕೆ ತಳ್ಳುವ ಸಹೋದರರೇ ಹೆಚ್ಚು ಮಂದಿಗಳು. ಭಾವದೇವನ ಭ್ರಾತೃಪ್ರೇಮವಾದರೋ ಅನುಕರಣೀಯ ವಾದುದು.

ಮೇಲೆ ಹೇಳಿದಂತೆ ಅವರೀರ್ವರೂ ತಂತಮ್ಮ ಮನಸ್ಸಿನಲ್ಲಿ ಯೋಚಿಸುತ್ತ ಸುಮಾರು ಮೂರು ಹರದಾರಿಯ ದೂರದವರೆಗೆ ಅರಣ್ಯ ದಲ್ಲಿ ನಡೆದು ಹೋಗಿ ಮುನಿಸಂಘದಲ್ಲಿ ಸೇರಿದರು. ಅಲ್ಲಿ ಭಾವದೇವ ಮುನಿಯ ಗುರುಗಳೂ ಮುನಿಸಂಘಾಧಿಪತಿಯೂ ಆದ ಆಚಾರ್ಯರನ್ನು ಕಂಡು ಈರ್ವರೂ ವಂದಿಸಿ ಯಥೋಚಿತಸ್ಥಾನದಲ್ಲಿ ಕುಳಿತುಕೊಂಡರು. ಆಗ ಆ ಮುನಿಸಂಘದಲ್ಲಿದ್ದ ಕೆಲವರು ಮುನಿಗಳು " ನಿಮ್ಮ ಜತೆಯಲ್ಲಿ ರುವ ಈತನಾರು ? " ಎಂದು ಭಾವದೇವಮುನಿಯನ್ನು ಕೇಳಿದರು. ಅದಕ್ಕೆ ಆ ಮುನಿಯು " ಈತನು ನಮ್ಮ ತಮ್ಮನು. ಗುರುಗಳ ದರ್ಶನ ಕ್ಕೋಸ್ಕರ ಬಂದಿದ್ದಾನೆ. ಗುರುಗಳ ಅನುಗ್ರಹದಿಂದ ಈತನು ಸನ್ಮಾ ರ್ಗಕ್ಕೆ ಬರುವನು " ಎಂದನು. ಆ ಮಾತನ್ನು ಕೇಳಿ ಮುನಿಗಳೆಲ್ಲರೂ ಅನುಮೋದಿಸಿ " ಎಲೈ ಮುನಿಯೇ ! ಸಂಸಾರಸಾಗರದಲ್ಲಿ ತೇಲಿಹೋ ಗುತ್ತಿದ್ದವನಿಗೆ ಪಾರಗಾಣಿಸಿದೆ. ಒಳ್ಳೆಯದಾಯಿತ್ತು. ಈಗ ಇವನು ಕರ್ಮಗಳನ್ನು ನಾಶಮಾಡಿ ಅನುಪಮನಿತ್ಯಸುಖವನ್ನು ಹೊಂದುವುದಕ್ಕೆ ಸಾಧಕವಾದ ಜಿನದೀಕ್ಷೆಯನ್ನು ಸ್ವೀಕರಿಸಬೇಕು " ಎಂದು ಹೇಳಲಾರಂ ಭಿಸಿದರು. ಆ ಮಾತನ್ನು ಕೇಳಿ ಭವದೇವನು " ಎಲೈ ವಿಧಿಯೆ ! ಇದೇನು ? ಈಗ ನಾನೇನು ಮಾಡಲಿ ? ನಾನು ದೀಕ್ಷೆಯನ್ನು ತೆಗೆದುಕೊಂಡರೆ

ನಿನ್ನೆ ತಾನೆ ಮದುವೆ ಮಾಡಿಕೊಂಡ ಹೆಂಡತಿಯು ಏನೆನ್ನುವಳು ? ಆಕೆಯು ಹೇಗೆ ಜೀವಿಸಿರುವಳು ? ಜನರು ನನಗೆ ಏನು ಹೇಳಿಯಾರು ? ಹಾಗೆಂದು ಮನೆಗೆ ಹೊರಟುಹೋದರೆ ಅಣ್ಣನ ಮಾತನ್ನು ಮೀರಿದಾತಾಗುವುದು. ಸಂಘದಲ್ಲಿರುವ ಇತರ ಮುನಿಗಳು 'ಇವನ ತಮ್ಮನು ಹೇಡಿ. ಇಂಥವನನ್ನು ಇವನೇಕೆ ಕರೆತಂದನು ?' ಎಂದು ಪರಿಹಾಸ್ಯಮಾಡುವರು " ಎಂದು ಮನಸ್ಸಿನಲ್ಲಿ ವಿಚಾರ ಮಾಡುತ್ತ " ಈಗ ಇವರು ಹೇಳುವಂತೆಯೇ ಮಾಡಿ ಕೆಲವು ದಿನಗಳ ವರೆಗೆ ಮುನಿಯಾಗಿದ್ದು ಬಳಿಕ ಅವಕಾಶವು ದೊರೆತಾಗ ತಪ್ಪಿಸಿಕೊಂಡು ಮನೆಗೆ ಓಡಿಹೋಗುವೆನು " ಎಂದು ಯೋಚಿಸಿ ಆ ಮುನಿಗಳ ಹೇಳಿಕೆಯಂತೆ ಜಿನದೀಕ್ಷೆಯನ್ನು ಸ್ವೀಕರಿಸಿದನು. ಧರ್ಮಾಚಾರ್ಯರು ಆತನು ಭವ್ಯನೆಂದೂ ತತ್ಕಾಲದಲ್ಲಿ ಅವನ ಮನದಲ್ಲಿ ದುರ್ಧ್ಯಾನವಿದ್ದರೂ ಮುಂದೆ ಅವನು ಮುನಿನಾಯಕನಾಗುವನೆಂದೂ ಬಗೆದು ಆತನಿಗೆ ದೀಕ್ಷೆಯನ್ನು ಕೊಟ್ಟರು. ಬಳಿಕ ಆ ಮುನಿಸಂಘವು ಅನೇಕ ದೇಶಗಳಲ್ಲಿ ವಿಹರಿಸಿ ಅನೇಕಾನೇಕ ಭವ್ಯಜೀವಗಳಿಗೆ ಧರ್ಮಾಮೃತಪಾನವನ್ನು ಮಾಡಿಸುತ್ತ ಹನ್ನೆರಡು ವರುಷಗಳ ನಂತರ ಪುನಃ ಅದೇ ವನಕ್ಕೆ ಬಂದಿತು. ಆಗ ಭವದೇವನು " ಈಗ ಮನೆಗೆ ಹೋಗಿ ನನ್ನ ಹೆಂಡತಿಯನ್ನು ನೋಡಬೇಕು " ಎಂದು ಮನದಲ್ಲಿ ವಿಚಾರಮಾಡಿ ಗುರುವಿಗೆ ನಮಸ್ಕರಿಸಿ ನಗರಾಭಿಮುಖನಾಗಿ ಈರ್ಯಾಪಥಶುದ್ಧಿಯಿಂದ ಹೋಗಿ ಒಂದು ಜಿನದೇವಾಲಯವನ್ನು ಕಂಡು ಒಳಕ್ಕೆ ಪ್ರವೇಶಿಸಿ ದೇವರಿಗೆ ನಮಸ್ಕಾರನನ್ನು ಮಾಡಿ ಉಚಿತಸ್ಥಾನದಲ್ಲಿ ಕುಳಿತನು. ಇತ್ತ ಆ ಭವದೇವನ ನೂತನ ವಿವಾಹಿತಪತ್ನಿಯು ತನ್ನ ಪತಿಯ ಸಮಾಚಾರವನ್ನು ತಿಳಿದು ಓರ್ವ ಜಿನಮುನಿಯ ಉಪದೇಶದಿಂದ ಸಂಸಾರಸುಖಭೋಗಗಳಲ್ಲಿ ಜಿಹಾಸೆಯನ್ನು—ವೈರಾಗ್ಯವನ್ನು ಹೊಂದಿ ದೀಕ್ಷೆಯನ್ನು ಸ್ವೀಕರಿಸಿ ಆರ್ಯಿಕೆಯಾಗಿ ತನ್ನ ಮನೆಯನ್ನು ಕೀಳಿಸಿ ಒಂದು ಜಿನದೇವಾಲಯವನ್ನು ಕಟ್ಟಿಸಿ ಅದರಲ್ಲಿ

ಶಾಸ್ತ್ರಾಧ್ಯಯನ ಜಪ ತಪೋಧ್ಯಾನಾದಿಗಳನ್ನು ಮಾಡಿಕೊಂಡಿದ್ದಳು. ಭವದೇವಮುನಿಯು ಬಂದು ದೇವದರ್ಶನವನ್ನು ಮಾಡಿ ಕುಳಿತಿದ್ದುದೂ ಅದೇ ದೇವಾಲಯದಲ್ಲಿ.

ಭವದೇವಮುನಿಯೂ ಆರ್ಯಿಕೆಯೂ ಒಬ್ಬರನ್ನೊಬ್ಬರು ನೋಡಿ ರತ್ನತ್ರಯಧರ್ಮದ ಕುಶಲಪ್ರಶ್ನೆಯನ್ನು ಮಾಡಿದನಂತರ ಭವದೇವನು "ಈ ನಗರದಲ್ಲಿ ಇರ್ವರು ಬ್ರಾಹ್ಮಣಪುತ್ರರಿದ್ದರು. ಅವರಿಬ್ಬರೂ ಜಿನ ದೀಕ್ಷೆಯನ್ನು ತೆಗೆದುಕೊಂಡು ಹೊರಟು ಹೋದರು. ಅವರಲ್ಲಿ ಚಿಕ್ಕವನು ಆಗತಾನೆ ಮದುವೆ ಮಾಡಿಕೊಂಡ ನೂತನವಧುವನ್ನು ಬಿಟ್ಟು ಹೋಗಿದ್ದನು. ಆಕೆಯ ವಿಚಾರವೇನಾದರೂ ನಿಮಗೆ ಗೊತ್ತಿದೆಯೋ ?" ಎಂದು ಆರ್ಯಿಕೆಯನ್ನು ಕೇಳಿದನು. ಆ ಮಾತನ್ನು ಕೇಳಿ ಆರ್ಯಿಕೆಯು ಆತನೇ ತನ್ನ ಪತಿಯೆಂದೂ ಚಂಚಲಚಿತ್ತನಾಗಿದ್ದಾನೆಂದೂ ಆತನಿಗೆ ಸರಿಯಾದ ವಿವೇಕವನ್ನು ಹೇಳಿ ಸ್ಥಿತೀಕರಣವನ್ನು ಮಾಡಬೇಕೆಂದೂ ಬಗೆದು ಇಂತೆಂದಳು—

"ಧೀರವೀರರಾದ ಸ್ವಾಮಿಯೇ ! ತಾವು ತಮ್ಮ ಮನಸ್ಸನ್ನು ಶಾಂತಮಾಡಿಕೊಳ್ಳಿರಿ. ಇಂತಹ ಪವಿತ್ರವಾದ ಮುನಿವ್ರತವನ್ನು ಸ್ವೀಕರಿಸಿರುವ ತಾವೇ ಧನ್ಯರು. ಹಾವಿನ ಹೆಡೆಯನ್ನು ಹಿಡಿಯುವಂತಿರುವ ಈ ಕಷ್ಟಸಾಧ್ಯವಾದ ವ್ರತಧಾರಣವು ಹೇಡಿಗಳಾದ ಮನುಷ್ಯರಿಂದ ಸಾಧ್ಯವಲ್ಲ. ಈ ವ್ರತವನ್ನು ಧರಿಸುವುದಕ್ಕೆ ತಮ್ಮಂಥವರೇ ಸಮರ್ಥರು" ಎಂದು ಸ್ತುತಿಸಿ "ಸ್ವಾಮಿಯೇ ! ಆ ನೂತನ ವಧುವು ನಾನೆ. ತಾವು ಹೊರಟುಹೋದನಂತರ ನಾನು ಈ ಸ್ತ್ರೀಪರ್ಯಾಯವು ಪರಾಧೀನವಾದುದೆಂದೂ ಇದನ್ನು ಸಾರ್ಥಕಗೊಳಿಸಬೇಕೆಂದೂ ಬಗೆದು ಈ ಆರ್ಯಿಕಾವ್ರತವನ್ನು ಸ್ವೀಕರಿಸಿದೆನು. ಮನೆಯನ್ನು ಕೀಳಿಸಿ ಈ ಚೈತ್ಯಾಲಯವನ್ನು ಕಟ್ಟಿಸಿದೆನು. ಈಗ ತಾವು ನಿಶ್ಚಿಂತರಾಗಿ ತಪಶ್ಚರಣವನ್ನು ಮಾಡಿರಿ" ಎಂದಳು. ಆ ಮಾತನ್ನು ಕೇಳಿ ಮಿಂಚು ಹೊಳೆದಂತಾಗಿ

ಭವದೇವಮುನಿಯು ಆ ಸ್ತ್ರೀಯ ಮನೋದಾರ್ಢ್ಯವನ್ನೂ ಜಿತೇಂದ್ರಿಯತ್ವವನ್ನೂ ಪರಿಭಾವಿಸಿ ಮನದೊಳಗೆ ಮೆಚ್ಚಿ ತನ್ನ ಚಿತ್ತಚಾಂಚಲ್ಯಕ್ಕೆ ಲಜ್ಜಿತನಾಗಿ ಹೊರಟು ವನಕ್ಕೆ ತನ್ನ ಗುರುವಿನ ಬಳಿಗೆ ಹೋಗಿ ನಮಸ್ಕರಿಸಿ ನಡೆದ ವೃತ್ತಾಂತವನ್ನೆಲ್ಲ ತಿಳಿಸಿದನು. ಆಗ ಗುರುವು ಭವದೇವ ಮುನಿಗೆ ಪುನರ್ದೀಕ್ಷೆಯನ್ನು ಕೊಟ್ಟು ಶುದ್ಧಿ ಮಾಡಿದನು. ಬಳಿಕ ಆ ಅಣ್ಣತಮ್ಮಂದಿರು— ಮುನಿಗಳೀರ್ವರೂ ವಿಪುಲಾಚಲ — ಪರ್ವತಕ್ಕೆ ಹೋಗಿ ಅಲ್ಲಿ ಉಗ್ರತಪಸ್ಸನ್ನು ಮಾಡಿ ಆಯುಷ್ಯಾವಸಾನದಲ್ಲಿ ಮಡಿದು ಸಾನತ್ಕುಮಾರವೆಂಬ ಮೂರನೆಯ ಸ್ವರ್ಗದಲ್ಲಿ ದೇವತೆಗಳಾಗಿ ಹುಟ್ಟಿ ತತ್ಕಾಲದಲ್ಲಿ ನವಯೌವನಪ್ರಾಪ್ತರಾಗಿ ಅಲ್ಲಿಯ ಅತುಲಸಂಪತ್ತಿಯನ್ನು ನೋಡಿ ಅವಧಿಜ್ಞಾನದಿಂದ ತಮ್ಮ ಪೂರ್ವಭವದ ವೃತ್ತಾಂತವನ್ನು ತಿಳಿದು “ ಈ ಅಭ್ಯುದಯಸಂಪತ್ತಿಯೆಲ್ಲವೂ ಜಿನಧರ್ಮದ ಪ್ರಭಾವದಿಂದಲೇ ನಮಗೆ ಪ್ರಾಪ್ತವಾದುದು ” ಎಂದು ತಿಳಿದು ಧರ್ಮದಲ್ಲಿ ಮತ್ತೂ ದಾರ್ಢ್ಯವನ್ನು ಹೊಂದಿ ವಿಮಾನಾರೂಢರಾಗಿ ಅನೇಕ ದೇವದೇವಿಯರೊಡನೆ ಭೂಲೋಕಕ್ಕೆ ಬಂದು ಎರಡುವರೆ ದ್ವೀಪಗಳಲ್ಲಿರುವ ಕೃತ್ರಿಮಾಕೃತ್ರಿಮಚೈತ್ಯಾಲಯಗಳನ್ನು ಸಂದರ್ಶಿಸಿ ವಂದಿಸಿ ತಮ್ಮ ಸ್ಥಾನಕ್ಕೆ ಹೊರಟು ಹೋಗಿ ಸುಖದಿಂದಿದ್ದರು. ಹೀಗೆ ತಮ್ಮ ಆಯುಷ್ಯಾವಸಾನಪರ್ಯಂತ ಸುಖವನ್ನನುಭವಿಸಿ ಅಲ್ಲಿಂದ ಚ್ಯುತರಾಗಿ ಬಂದು ಭಾವದೇವನ ಜೀವವು ಅಪರವಿದೇಹಕ್ಷೇತ್ರದ ಪುಂಡರೀಕಿಣೀನಗರದ ವಜ್ರದಂತರಾಜನಿಗೆ ಆತನ ಪತ್ನಿಯಲ್ಲಿ ಸಾಗರಚಂದ್ರನೆಂಬ ಪುತ್ರನಾಗಿ ಜನಿಸಿತು. ಭವದೇವನ ಜೀವವು ವೀತಶೋಕಪುರದ ಮಹಾಪದ್ಮಚಕ್ರವರ್ತಿಗೆ ವನಮಾಲೆಯೆಂಬ ಪಟ್ಟಮಹಿಷಿಯಲ್ಲಿ ಶಿವಕುಮಾರನೆಂಬ ಪುತ್ರನಾಗಿ ಜನಿಸಿತು. ಆ ಸಾಗರಚಂದ್ರ ಶಿವಕುಮಾರ ರಾಜಪುತ್ರರೀರ್ವರೂ ತಂತಮ್ಮ ಸ್ಥಾನಗಳಲ್ಲಿ ವೃದ್ಧಿಯನ್ನು ಹೊಂದುತ್ತ ಅನೇಕ ಪ್ರಕಾರವಾದ ವಿದ್ಯೆಗಳನ್ನು ಅಭ್ಯಾಸ ಮಾಡುತ್ತಿದ್ದರು.

ಒಂದಾನೊಂದು ದಿವಸ ಪುಂಡರೀಕಿಣೀನಗರೋದ್ಯಾನಕ್ಕೆ ಮುನೀಶ್ವರರು ಬಂದಿದ್ದಾರೆಂಬ ವಿಷಯವನ್ನು ತಿಳಿದು ಸಾಗರಚಂದ್ರನು ಆ ಮುನೀಶ್ವರರನ್ನು ವಂದಿಸುವುದಕ್ಕಾಗಿ ಉದ್ಯಾನಕ್ಕೆ ಹೋಗಿ ಅವರನ್ನು ಕಂಡು ಭಕ್ತಿಪೂರ್ವಕವಾಗಿ ವಂದಿಸಿ ಬಳಿಕ ಧರ್ಮದ ಸ್ವರೂಪವನ್ನು ಕೇಳಿದನು. ಆಗ ಮುನೀಶ್ವರರು ಯತಿಧರ್ಮದ ಮತ್ತು ಗೃಹಸ್ಥಧರ್ಮದ ಸ್ವರೂಪವನ್ನೂ ಸಂಸಾರದ ಕ್ಷಣಭಂಗುರತೆಯನ್ನೂ ಸಾಗರಚಂದ್ರನ ಪೂರ್ವಭವವೃತ್ತಾಂತವನ್ನೂ ವರ್ಣಿಸಿದರು. ಅದನ್ನು ಕೇಳಿ ಸಾಗರಚಂದ್ರನು ಸಂಸಾರ ಶರೀರ ಭೋಗಗಳಲ್ಲಿ ವಿರಕ್ತನಾಗಿ ಮುನಿದೀಕ್ಷೆಯನ್ನು ಸ್ವೀಕರಿಸಿ ಜಪತಪಸ್ಸಂಯಮಗಳಲ್ಲಿ ಆಸಕ್ತನಾದನು. ಬಹು ದಿನಗಳನಂತರ ಆ ಸಾಗರಚಂದ್ರಮುನಿಯು ತನ್ನ ಗುರುವಿನೊಡನೆ ವಿಹರಿಸುತ್ತ ವೀತಶೋಕಪುರದ ಉದ್ಯಾನಕ್ಕೆ ಹೋಗಿ ಅಲ್ಲಿ "ಈ ಶರೀರವು ತಪಸ್ಸಿಗೂ ವ್ರತಾದಿಗಳಿಗೂ ಸಾಧನವಾಗಿದೆ. ಆಯುಷ್ಯ ಪೂರ್ತಿಯಾಗುವ ವರೆಗೆ ಇದು ಸ್ಥಿರವಾಗಿರಬೇಕು. ಧರ್ಮಧ್ಯಾನದಲ್ಲಿ ಶೈಥಿಲ್ಯವುಂಟಾಗಬಾರದು. ಗಾಡಿಯ ಚಕ್ರಕ್ಕೆ ಎಣ್ಣೆಯನ್ನು ಹಾಕಿದರೆ ಅದು ನಿರಾತಂಕವಾಗಿ ನಡೆಯುವಂತೆ, ಈ ಶರೀರವೂ ಪೋಷಣೆಯಿಂದ ಮೋಕ್ಷನಗರದವರೆಗೆ ನಿರಾತಂಕವಾಗಿ ನಡೆಯಬೇಕು" ಎಂಬುದಾಗಿ ಮನಸ್ಸಿನಲ್ಲಿ ಭಾವನೆ ಮಾಡುತ್ತ ಆಹಾರನಿಮಿತ್ತವಾಗಿ ನಗರಪ್ರವೇಶವನ್ನು ಮಾಡಿದನು. ಆತನನ್ನು ನೋಡಿ ಶ್ರಾವಕನೋರ್ವನು ಪ್ರತಿಗ್ರಹ ಮೊದಲಾದ ನವವಿಧಭಕ್ತಿಗಳಿಂದ ಆಹಾರವನ್ನಿತ್ತನು. ಮುನಿಯು ನಿರಂತರಾಯವಾಗಿ ಆಹಾರವನ್ನು ಸ್ವೀಕರಿಸಿ "ಅಕ್ಷಯದಾನವಾಗಲಿ" ಎಂದು ಹರಸಿದನು. ಅದರ ಮಹಿಮೆಯಿಂದ ನಗರದಲ್ಲಿ ರತ್ನವೃಷ್ಟಿ, ಪುಷ್ಪವೃಷ್ಟಿ, ಗಂಧೋದಕವೃಷ್ಟಿ, ಸುಗಂಧ ಮಂದಮಾರುತ, ದೇವದುಂದುಭಿಗಳೆಂಬ ಪಂಚಾಶ್ಚರ್ಯಗಳಾದುವು. ಆದರಿಂದ ಪುರನಿವಾಸಿಗಳಿಗೆ ಆಶ್ಚರ್ಯವಾಗಿ ಆ ಮಹಿಮೆಯನ್ನು ನೋಡಬೇಕೆಂದು ಅವರೆಲ್ಲ ಆ ಮುನಿಯ ಬಳಿಗೆ ಬಂದು ಸೇರಿ

ದರು. ಆಗ ಆ ಶಿವಕುಮಾರರಾಜಪುತ್ರನೂ ಅಲ್ಲಿಗೆ ಬಂದು ಮುನಿಯನ್ನು ನೋಡಿ ಬಹುಪ್ರೀತಿಯುಳ್ಳವನಾಗಿ ವಿನಯದಿಂದ ನಮಸ್ಕರಿಸಿ ತನಗೆ ಆ ಮುನಿಯಲ್ಲಿ ಬಹು ಪ್ರೀತಿಯುಂಟಾಗಲು ಕಾರಣವೇನೆಂದು ಪ್ರಶ್ನೆ ಮಾಡಿದನು. ಆಗ ಆ ಮುನಿಯು ಪೂರ್ವಭವಗಳ ವೃತ್ತಾಂತವನ್ನು ದಿವ್ಯಜ್ಞಾನದಿಂದ ತಿಳಿದು ಶಿವಕುಮಾರನಿಗೆ ಹೇಳಿದನು. ಅದನ್ನು ಕೇಳಿದೊಡನೆಯೇ ಆ ರಾಜಕುಮಾರನು ಮೂರ್ಛಿತನಾದನು. ಅವನಿಗೆ ಶೈತ್ಯೋಪಚಾರವನ್ನು ಮಾಡಿ ಮೂರ್ಛೆಯಿಂದ ಎಚ್ಚರಗೊಳಿಸಿ ಬಳಿಕ ಮಂತ್ರಿಗಳು ರಾಜನ ಬಳಿಗೆ ಹೋಗಿ ಆ ಸಮಾಚಾರವನ್ನು ತಿಳುಹಿದರು. ರಾಜನು ಪತ್ನೀಸಹಿತನಾಗಿ ಶೀಘ್ರವಾಗಿ ಉದ್ಯಾನಕ್ಕೆ ಬಂದು ಮಗನನ್ನು ತನ್ನ ಅರಮನೆಗೆ ಕರೆದೊಯ್ಯಲು ಉದ್ಯುಕ್ತನಾದನು. ಆಗ ಆ ಶಿವಕುಮಾರನು ರಾಜನನ್ನು ಕುರಿತು "ತಂದೆಯೆ! ಈ ಭೋಗವು ಕ್ಷಣಭಂಗುರವಾದುದು. ಇನ್ನು ನಾನು ಮನೆಗೆ ಬರುವುದಿಲ್ಲ. ಮಹಾವ್ರತವನ್ನು ಸ್ವೀಕರಿಸಿ ಇಲ್ಲಿ ಗುರುವಿನ ಬಳಿಯಲ್ಲಿ ಅಧ್ಯಾತ್ಮಾನುಭವವನ್ನು ಮಾಡುವೆನು" ಎಂದು ಹೇಳಿದನು. ಅದಕ್ಕೆ ರಾಜನು "ಮಗನೆ! ಇನ್ನೂ ನಿನಗೆ ಬಾಲ್ಯಾವಸ್ಥೆ. ನಿನ್ನ ಶರೀರವು ಬಹು ಕೋಮಲವಾಗಿದೆ. ಜಿನದೀಕ್ಷೆಯಾದರೋ ಬಹು ಕಠಿನವಾದುದು. ಆದುದರಿಂದ ನೀನು ಕೆಲವು ದಿನಗಳ ವರೆಗೆ ರಾಜ್ಯಭಾರವನ್ನು ವಹಿಸಿ ನಮ್ಮ ಅಭಿಲಾಷೆಯನ್ನು ನೆರವೇರಿಸು. ಅನಂತರ ಅವಕಾಶವನ್ನು ನೋಡಿ ಮಹಾವ್ರತವನ್ನು ಪರಿಗ್ರಹಿಸು. ಈ ಬಾಲ್ಯಾವಸ್ಥೆಯು ತಪಸ್ಸನ್ನು ಮಾಡುವುದಕ್ಕೆ ತಕ್ಕುದಲ್ಲವು" ಎಂದು ಮೊದಲಾಗಿ ಸಮಾಧಾನೋಕ್ತಿಗಳನ್ನು ಹೇಳಿದರೂ ಮಗನು ಕೇಳದಿರಲು ನಿರಾಶನಾಗಿ ಕೊನೆಗೆ ರಾಜನು "ಮಗನೆ, ನೀನು ವ್ರತವನ್ನು ತೆಗೆದುಕೊಳ್ಳಲೇಬೇಕಾದರೆ ಮುನಿವ್ರತವನ್ನು ಸ್ವೀಕರಿಸದೆ ಕ್ಷುಲ್ಲಕವ್ರತವನ್ನು ಸ್ವೀಕರಿಸು. ಹಾಗೆ ನೀನು ಮಾಡದಿರುವ ಪಕ್ಷದಲ್ಲಿ ನಾನು ಪ್ರಾಣತ್ಯಾಗ ಮಾಡುವೆನು" ಎಂದನು. ತಂದೆ ತಾಯಿ

ಗಳ ಈ ರೀತಿಯಾದ ಮುಷ್ಕರವನ್ನು ನೋಡಿ ಶಿವಕುಮಾರನು ಅವರ ಮಾತಿನಂತೆ ಕ್ಷುಲ್ಲಕವ್ರತವನ್ನು ಸ್ವೀಕರಿಸಿ ಮನೆಯಲ್ಲೇ ಇದ್ದು ಅರುವತ್ತನಾಲ್ಕು ಸಾವಿರ ವರುಷಗಳ ವರೆಗೆ ಅನ್ನ ಮತ್ತು ನೀರನ್ನು ಮಾತ್ರ ಸ್ವೀಕರಿಸುತ್ತ ಧರ್ಮಧ್ಯಾನದಿಂದ ಕಾಲವನ್ನು ಕಳೆಯುತ್ತಿದ್ದನು. ಸಾಗರಚಂದ್ರಮುನಿಯಾದರೋ ಅಲ್ಲಿಂದ ಹೊರಟು ತಪೋವನಕ್ಕೆ ಹೋಗಿ ಉಗ್ರತಪಸ್ಸನ್ನು ಮಾಡುತ್ತ ಆಯುಷ್ಯಾವಸಾನದಲ್ಲಿ ಸಮಾಧಿವಿಧಿಯಿಂದ ಮಡಿದು ಬ್ರಹ್ಮೋತ್ತರವೆಂಬ ಆರನೆಯ ಸ್ವರ್ಗದಲ್ಲಿ ವಿದ್ಯುದ್ವೇಗನೆಂಬ ದೇವನಾಗಿ ಹುಟ್ಟಿದನು. ಶಿವಕುಮಾರನೂ ಆಯುಷ್ಯಾವಸಾನದಲ್ಲಿ ಸಮಾಧಿವಿಧಿಯಿಂದ ಮಡಿದು ಅದೇ ಬ್ರಹ್ಮೋತ್ತರಸ್ವರ್ಗದಲ್ಲಿ ವಿದ್ಯುನ್ಮಾಲಿಯೆಂಬ ದೇವನಾಗಿ ಜನಿಸಿ ಪೂರ್ವಭವದಲ್ಲಿ ಮಾಡಿದ್ದ ತಪಸ್ಸಿನ ಪ್ರಭಾವದಿಂದ ನಾನಾಪ್ರಕಾರವಾದ ಸುಖಗಳನ್ನು ಅನುಭವಿಸಿದನು. ಆದುದರಿಂದ ಎಲೈ ರಾಜನೆ, ಈ ವಿದ್ಯುನ್ಮಾಲಿದೇವನು ಪೂರ್ವಭವದಲ್ಲಿ ಮಾಡಿರುವ ತಪಸ್ಸಿನ ಪ್ರಭಾವದಿಂದ ಇಂತಹ ಅದ್ಭುತವಾದ ದೇಹಕಾಂತಿಯುಳ್ಳವನಾಗಿದ್ದಾನೆ" ಎಂದು ಗೌತಮಗಣಧರರು ಶ್ರೇಣಿಕನಿಗೆ ಹೇಳಿದರು. ಆ ಮಾತುಗಳನ್ನು ಕೇಳಿ ಶ್ರೇಣಿಕನು ಬಹುವಿನಯದಿಂದ ಕೂಡಿದವನಾಗಿ 'ಎಲೈ ಸ್ವಾಮಿಯೆ! ಈ ದೇವನ ವಿಶೇಷವಾರ್ತೆಯನ್ನು ತಿಳಿಯಲಿಚ್ಛಿಸುತ್ತೇನೆ. ದಯೆಯಿಟ್ಟು ಹೇಳಬೇಕು" ಎಂದನು. ಆಗ ಗೌತಮಸ್ವಾಮಿಯು ಇಂತೆಂದರು:—

ಅಂಗದೇಶದಲ್ಲಿ ಚಂಪಾಪುರವೆಂಬ ನಗರವಿರುತ್ತದೆ. ಅಲ್ಲಿ ಸೂರಸೇನನೆಂಬ ವೈಶ್ಯನಿದ್ದನು. ಆತನಿಗೆ ಬಹಳ ರೂಪವತಿಯರಾದ ನಾಲ್ಕು ಮಂದಿ ಪತ್ನಿಯರಿದ್ದರು. ಒಂದು ಕಾಲದಲ್ಲಿ ಆ ಸೂರಸೇನನಿಗೆ ಪೂರ್ವಾರ್ಜಿತ ಪಾಪಕರ್ಮದ ಉದಯದಿಂದ ವಾತರೋಗವುಂಟಾಗಿ ಅದರಿಂದ ಹುಚ್ಚನಂತಾಗಿ ತನ್ನ ಪತ್ನಿಯರಿಗೆ ನಾನಾವಿಧವಾದ ಕಷ್ಟವನ್ನು ಕೊಟ್ಟನು. ಅವರ ಕಿವಿ ಮೂಗುಗಳನ್ನು ಕತ್ತರಿಸಿದನು. ಅದರಿಂದ ಆ ಸ್ತ್ರೀ

ಯರು ಬಹು ದುಃಖಿತರಾಗಿ ವಾಸುಪೂಜ್ಯಜಿನೇಶ್ವರರ ಚೈತ್ಯಾಲಯಕ್ಕೆ ಹೋಗಿ ಆರ್ಯಿಕೆಯರಾಗಿ ವ್ರತನಿಯಮಾದಿಗಳನ್ನು ಪಾಲಿಸಿ ಆಯುಷ್ಯಾವಸಾನದಲ್ಲಿ ಸಮಾಧಿವಿಧಿಯಿಂದ ಮಡಿದು ಅದೇ ಬ್ರಹ್ಮೋತ್ತರಸ್ವರ್ಗದಲ್ಲಿ ದೇವಸ್ತ್ರೀಯರಾಗಿ ಹುಟ್ಟಿದರು. ಅವರೆಲ್ಲರೂ ಸ್ವರ್ಗಸುಖವನ್ನನುಭವಿಸಿ ಆಯುಷ್ಯಾವಸಾನದಲ್ಲಿ ಅಲ್ಲಿಂದ ಚ್ಯುತರಾಗಿ ಬಂದು ಆ ದೇವದೇವಿಯರೆಲ್ಲರೂ ದೀಕ್ಷೆಯನ್ನು ತೆಗೆದುಕೊಳ್ಳುವರು. ಇದರ ವಿಶೇಷವರ್ಣನೆಯನ್ನೂ ಕೇಳು.

ಹಸ್ತಿನಾಪುರದ ದೊರೆಯಾದ ದುರದಂದನೆಂಬವನಿಗೆ ಆ ಶಿವಕುಮಾರನ ಜೀವವು ಆರನೆಯ ಸ್ವರ್ಗದಿಂದ ಚ್ಯುತವಾಗಿ ಬಂದು ವಿದ್ಯುಚ್ಚರನೆಂಬ ಪುತ್ರನಾಗಿ ಜನಿಸಿತು. ಆ ವಿದ್ಯುಚ್ಚರನು ಮಹಾ ಬಲಶಾಲಿಯೂ ಪ್ರತಾಪಿಯೂ ಸಮಸ್ತ ವಿದ್ಯೆಗಳಲ್ಲಿ ನಿಪುಣನೂ ಆಗಿದ್ದುದಲ್ಲದೆ ಚೌರ್ಯವನ್ನೂ ಕಲಿತನು. ಒಂದು ದಿನ ಆತನು ರಾಜಭಂಡಾರವನ್ನು ಕಳುವು ಮಾಡಿ ಕೊತವಾಲನ ಕೈಗೆ ಸಿಕ್ಕಿ ರಾಜನ ಮುಂದೆ ಒಯ್ಯಲ್ಪಟ್ಟನು. ರಾಜನು ಪುತ್ರನ ಆ ಅವಸ್ಥೆಯನ್ನು ನೋಡಿ ದುಃಖಿತನಾಗಿ "ಎಲೈ ಮಗನೆ, ನೀನು ಈ ರಾಜಭಂಡಾರವನ್ನೆಲ್ಲ ತೆಗೆದುಕೊ. ಆದರೆ ಕದಿಯುವುದನ್ನು ಬಿಟ್ಟುಬಿಡು. ಇಷ್ಟವಾದುದೆಲ್ಲವೂ ಪ್ರಾಪ್ತವಾದ ಬಳಿಕ ಯಾರೂ ಕಳುವು ಮಾಡುವುದಿಲ್ಲ" ಎಂದು ಮಗನಿಗೆ ಬುದ್ಧಿವಾದವನ್ನು ಹೇಳಿದನು. ಆದರೆ ಆ ವಿದ್ಯುಚ್ಚರನು ತಾನು ಕಲಿತ ಆ ದುರ್ವಿದ್ಯೆಯನ್ನು ಬಿಡಲಿಲ್ಲ. ರೋಗಿಗೆ ಅಪಥ್ಯಪದಾರ್ಥವು, ಕೊನೆಯಲ್ಲಿ ಪ್ರಾಣಾಪಾಯಕರವಾಗಿದ್ದರೂ, ತತ್ಕಾಲದಲ್ಲಿ ಒಳ್ಳೆಯದಾಗಿ ತೋರುವುದಲ್ಲವೇ ? ದೊರೆಯು ಅತ್ಯಂತ ದುಃಖಿತನಾಗಿ ಮಗನನ್ನು ಕುರಿತು "ನೀನು ಈ ದುಷ್ಕೃತ್ಯವನ್ನು ಬಿಡದಿದ್ದರೆ ಒಂದಲ್ಲ ಒಂದು ದಿನ ನಿನ್ನ ಪ್ರಾಣಗಳಿಗೆ ಅಪಾಯವು ಸಂಭವಿಸುವುದು. ಅದರಿಂದ ನೀನು ಬಹು ದುಃಖಿತನಾಗುವೆ" ಎಂದನು. ಆ ಮಾತನ್ನು ಕೇಳಿ ವಿದ್ಯುಚ್ಚರನು

" ತಂದೆಯೆ, ನಾನು ಈ ಕೃತ್ಯವನ್ನು ಬಿಡಲಾರೆನು. ನಾನು ನಿಮ್ಮ ರಾಜ್ಯದಲ್ಲಿ ಕದ್ದು ಲೂಟಿ ಮಾಡಿ ಮಾಡಿ ತಿನ್ನುವೆನು. ಅಥವಾ ನಿಮ್ಮ ರಾಜ್ಯವನ್ನಾದರೂ ಬಿಟ್ಟು ವಿದೇಶಕ್ಕೆ ಹೋಗುವೆನು. ಆದರೂ ಕಳುವನ್ನು ಬಿಡೆನು " ಎಂದನು. ಆ ಮಾತನ್ನು ಕೇಳಿ ದೊರೆಯು ನಿರಾಶನಾಗಿ ತನ್ನ ದೇಶವನ್ನು ಬಿಟ್ಟು ಹೋಗುವಂತೆ ಮಗನಿಗೆ ಆಜ್ಞೆಮಾಡಿದನು. ನ್ಯಾಯನಿಷ್ಠರಾದ ಸತ್ಪುರುಷರು ತಮ್ಮ ಮಕ್ಕಳು ತಪ್ಪು ಮಾಡಿದರೂ ಪಕ್ಷಪಾತವನ್ನು ಮಾಡದೆ, ಅವರನ್ನು ದಂಡಿಸುವರೆಂಬುದಕ್ಕೆ ದುರದಂಡ ರಾಜನು ಉದಾಹರಣೆಯಾದನು.

ಇತ್ತ ವಿದ್ಯುಚ್ಚರನು ತನ್ನ ತಂದೆಯ ರಾಜ್ಯದಿಂದ ಹೊರಟು ಕೆಲವು ದಿನಗಳಲ್ಲಿ ರಾಜಗೃಹನಗರಕ್ಕೆ ಹೋಗಿ ಕಮಲೆಯೆಂಬ ವೇಶ್ಯೆಯ ಮನೆಯಲ್ಲಿದ್ದು ರಾತ್ರಿಕಾಲದಲ್ಲಿ ಆ ನಗರದ ಮನೆಗಳಿಗೆ ನುಗ್ಗಿ ಕಳುವು ಮಾಡಿ ತಂದು ತಂದು ಆ ವೇಶ್ಯೆಯ ಮನೆಯನ್ನು ತುಂಬಿ ಕಾಲ ಯಾಪನೆಯನ್ನು ಮಾಡುತ್ತಿದ್ದನು.

ಇದೇ ರಾಜಗೃಹನಗರದಲ್ಲಿ ಅರ್ಹದ್ದಾಸನೆಂಬ ವೈಶ್ಯನಿದ್ದಾನೆ. ಆತನಿಗೆ ಮಹಾಶೀಲವತಿಯಾದ ಜಿನಮತಿಯೆಂಬ ಪತ್ನಿಯಿದ್ದಾಳೆ. ಮೂರು ದಿನಗಳ ಆಯುಷ್ಯವುಳಿದಿರುವ ಈ ವಿದ್ಯುದ್ವೇಗ-ದೇವನು ಸ್ವರ್ಗ ದಿಂದ ಚ್ಯುತನಾಗಿ ಈ ವೈಶ್ಯದಂಪತಿಗಳಿಗೆ ಪುತ್ರನಾಗಿ ಜನಿಸಿ ಮುಂದೆ ತಪಸ್ಸನ್ನು ಮಾಡಿ ಭವಬಂಧನವನ್ನು ಮುರಿದು ಸ್ವಾನುಭೂತಿರೂಪ ವಾದ ಯಥಾರ್ಥಸುಖವನ್ನು ಅನುಭವಿಸುವನು.' ಹೀಗೆಂದು ಹೇಳುವ ಷ್ಟರಲ್ಲಿ ಒಬ್ಬ ಯಕ್ಷದೇವನು ಅಲ್ಲಿ ಕುಣಿಯಲಾರಂಭಿಸಿದನು. ಅದನ್ನು ನೋಡಿ ಶ್ರೇಣಿಕನು ವಿಸ್ಮಿತನಾಗಿ ಗೌತಮಗಣಧರರನ್ನು ಕುರಿತು " ಸ್ವಾಮಿಯೆ, ಈ ಯಕ್ಷದೇವನೇಕೆ ಕುಣಿಯುತ್ತಾನೆ ? " ಎಂದು ಕೇಳಿ ದನು. ಅದಕ್ಕೆ ಗೌತಮಗಣಧರರು " ಅರ್ಹದ್ದಾಸನಿಗೆ ಮಹಾದುರ್ವ್ಯ ಸನಿಯೂ ಕುರೂಪಿಯೂ ಆದ ರುದ್ರದಾಸನೆಂಬ ಸಹೋದರನಿದ್ದನು.

ಆತನು ಒಂದು ದಿವಸ ಜೂಜಾಡಿ ತನ್ನ ಸರ್ವಸ್ವವನ್ನೂ ಕಳೆದುಕೊಂಡು ಬಳಿಕ ಸಾಲವನ್ನು ಮಾಡಿ ಜೂಜಾಡಿದನು. ಅದೂ ಹೋಯ್ತು. ಆತನಿಗೆ ಸಾಲವನ್ನು ಕೊಟ್ಟಿದ್ದ ಬೇರೆ ಜೂಜುಗಾರರು ತಮ್ಮ ಹಣವನ್ನು ಕೊಡಬೇಕೆಂದು ನಿರ್ಬಂಧಿಸಿ ಆತನ ಕೈಕಾಲುಗಳನ್ನು ಕಟ್ಟಿ ಬಹಳವಾಗಿ ಹೊಡೆದರು. ಅದರಿಂದ ಆತನು ಮೂರ್ಛಿತನಾದನು. ಆ ಸಮಾಚಾರವನ್ನು ಕೇಳಿ ಅರ್ಹದ್ದಾಸನು ಕೂಡಲೆ ರುದ್ರದಾಸನನ್ನು ಮಂಚದಲ್ಲಿ ಮಲಗಿಸಿ ಮನೆಗೆ ತರಿಸಿ ಆತನ ಅವಸ್ಥೆಯನ್ನು ನೋಡಿ ಅವಸಾನಕಾಲವು ಸಮೀಪಿಸಿರುವುದೆಂದು ತಿಳಿದು ಸನ್ಯಾಸವಿಧಿಯಿಂದ ಪ್ರಾಣತ್ಯಾಗ ಮಾಡಿಸಿದನು. ಅದರ ಪ್ರಭಾವದಿಂದ ಆ ರುದ್ರದಾಸನು ಈ ಯಕ್ಷದೇವನಾಗಿ ಹುಟ್ಟಿ ತನ್ನ ವಂಶದಲ್ಲಿ ಮೋಕ್ಷಗಾಮಿಯಾದ ವಿದ್ಯುದ್ವೇಗನು ಬಂದು ಹುಟ್ಟುವನೆಂದು ಕೇಳಿ ಸಂತುಷ್ಟನಾಗಿ ಕುಣಿಯುತ್ತಿದ್ದಾನೆ'' ಎಂದು ಉತ್ತರವನ್ನು ಹೇಳಿದರು.

ಈ ವೃತ್ತಾಂತವನ್ನು ಕೇಳಿ ಸಮವಸರಣಸಭಿಕರಿಗೆಲ್ಲ ಅತ್ಯಾನಂದವಾಯ್ತು. ಅರ್ಹದ್ದಾಸದಂಪತಿಗಳ ಆನಂದಕ್ಕಂತು ಪಾರವೇ ಇರಲಿಲ್ಲ, ಪುರನಿವಾಸಿಗಳೂ ಆನಂದಭರಿತರಾದರು. ಒಂದಾನೊಂದು ದಿವಸ ಜಿನಮತಿಯು ಚತುರ್ಥಸ್ನಾನವನ್ನು ಮಾಡಿ ಆ ದಿನ ರಾತ್ರಿ ಪತಿಯೊಡನೆ ಸುಖನಿದ್ರಾಮುದ್ರಿತಳಾಗಿರುವಾಗ ಬೆಳಗಿನ ಜಾವದಲ್ಲಿ ಶುಭಸ್ವಪ್ನವನ್ನು ಕಂಡು ಬೆಳಗಾದನಂತರ ಪತಿಗೆ ತಿಳುಹಿದಳು. ಪುಣ್ಯಾತ್ಮರಿಗೆ ಶುಭಾಶುಭಗಳು ಸ್ವಪ್ನಪೂರ್ವಕವಾಗಿ ಉಂಟಾಗುತ್ತವೆನ್ನುವ ಮಾತು ಚರಿತಾರ್ಥವಾಯ್ತು. ಅರ್ಹದ್ದಾಸನು ಗಣಧರವಚನವನ್ನು ಸ್ಮರಿಸಿಕೊಂಡು ನಿಮಿತ್ತಶಾಸ್ತ್ರದ ಮೂಲಕವಾಗಿ ಸ್ವಪ್ನದ ಫಲವನ್ನು ತಿಳಿದು ಸಂತುಷ್ಟನಾಗಿ ತನ್ನ ಪತ್ನಿಯನ್ನು ಕುರಿತು "ಪ್ರಿಯಳೆ! ಮೋಕ್ಷಗಾಮಿಯಾಗುವ ಪುತ್ರನು ನಿನ್ನ ಗರ್ಭದಲ್ಲಿ ಜನಿಸುವನು" ಎಂದನು. ಆ ಮಾತನ್ನು ಕೇಳಿ ಜಿನಮತಿಗೂ ಬಂಧುಪರಿವಾರದವರಿಗೂ ಬಹು ಸಂ

ತ್ಸೋಷವಾಯ್ತು. ಮರುದಿವಸ ರಾತ್ರಿ ಆ ವಿದ್ಯುನ್ಮಾಲೀಗನು ಸ್ವರ್ಗದಿಂದ ಚ್ಯುತನಾಗಿ ಜಿನಮತಿಯ ಗರ್ಭಕ್ಕೆ ಅವತರಿಸಿ ಹತ್ತು ತಿಂಗಳ ವರೆಗೆ ಬೆಳೆದು ಬಳಿಕ ಶುಭಮುಹೂರ್ತದಲ್ಲಿ ಜನಿಸಿದನು. ಪುತ್ರರತ್ನದ ಪ್ರಾಪ್ತಿಯ ಸಂತೋಷಸೂಚಕವಾಗಿ ಅರ್ಹದ್ದಾಸನು ತನ್ನ ಮನೆಯಲ್ಲಿ ಮಂಗಲವಾದ್ಯ ಮಂಗಲಗಾನಗಳನ್ನು ಮಾಡಿಸಿದನು. ಯಾಚಕರಿಗೆ ಯಥೇಚ್ಛವಾಗಿ ದಾನವನ್ನು ಕೊಟ್ಟನು. ಬಂಧು ಮಿತ್ರರಿಗೆಲ್ಲ ಯಥೋಚಿತವಾಗಿ ಸನ್ಮಾನವಮಾಡಿದನು. ಜೋಯಿಸರು ಮಗುವಿನ ಜನ್ಮಲಗ್ನದ ಶುಭಫಲವನ್ನು ಗುಣಿಸಿ ಹೇಳಿ ಮಾತಾಪಿತೃಗಳು ಮೊದಲಾಗಿ ಎಲ್ಲರಿಗೂ ಆನಂದವನ್ನುಂಟುಮಾಡಿದರು. ಹದಿನಾರನೆಯ ದಿವಸ ನಾಮಕರಣಮಹೋತ್ಸವವನ್ನು ಮಾಡಿ ಮಗುವಿಗೆ " ಜಂಬೂಸ್ವಾಮಿ " ಎಂಬ ಶುಭನಾಮವನ್ನಿಟ್ಟರು. ಆ ಬಾಲಕನು ಶುಕ್ಲಪಕ್ಷದ ಚಂದ್ರನಂತೆ ಪ್ರತಿದಿನ ಬೆಳೆಯುತ್ತಿದ್ದನು. ಆ ಬಾಲಕನ ಸೌಂದರ್ಯವನ್ನು ನೋಡಿ ರಾಜನೂ ಪುರನಿವಾಸಿಗಳೂ ಬಹು ಸಂತೋಷವುಳ್ಳವರಾದರು.

ಹತ್ತನೆಯ ವರ್ಷ ವಯಸ್ಸಿನಲ್ಲಿ ಒಂದು ದಿನ ಆ ಜಂಬೂಸ್ವಾಮಿ- ಬಾಲಕನು ವಸ್ತ್ರಾಭರಣಗಳನ್ನು ಧರಿಸಿಕೊಂಡು ತನ್ನ ಸಮಾನ ವಯಸ್ಕರಾದ ಬಾಲಕರೊಡನೆ ಆಡುತ್ತ ನಕ್ಷತ್ರಗಳ ಮಧ್ಯದಲ್ಲಿ ಚಂದ್ರನಂತೆ ಶೋಭಿಸುತ್ತಿದ್ದನು. ಪುರನಿವಾಸಿಗಳು ಆ ಬಾಲಕನನ್ನು ನೋಡಿ ಬಹು ಸಂತೋಷದಿಂದ ಆಶೀರ್ವದಿಸುತ್ತಿದ್ದರು. ಅವನು ಹೋಗುತ್ತಿದ್ದ ಬೀದಿಗಳಲ್ಲಿ ಲಕ್ಷೋಪಲಕ್ಷ ಜನರು ತಮ್ಮ ಆವಶ್ಯಕ ಕಾರ್ಯಗಳನ್ನು ಮರೆತು ಆತನನ್ನು ಎವೆಯಿಕ್ಕದೆ ನೋಡುತ್ತಿದ್ದರು.

ಒಂದಾನೊಂದು ದಿವಸ ರಾಜನು ಕ್ರೀಡಾನಿಮಿತ್ತವಾಗಿ ವನಕ್ಕೆ ಹೋಗಿದ್ದನು. ಪುರನಿವಾಸಿಗಳು ಆನಂದಪರವಶರಾಗಿದ್ದರು. ಅಕಸ್ಮಾತ್ ರಾಜನ ಪಟ್ಟದಾನೆಗೆ ಮದವೇರಿ ಬಂಧನವನ್ನು ಬಿಡಿಸಿಕೊಂಡು ಬಂದು ಬೀದಿ ಬೀದಿಗಳಲ್ಲಿ ಓಡಾಡುತ್ತ ಭಯಂಕರವಾದ ಉಪದ್ರವವನ್ನು

ಮಾಡಲಾರಂಭಿಸಿತು. ಪುರನಿವಾಸಿಗಳೆಲ್ಲ ಭಯಭೀತರಾಗಿ ಮನೆ ಬಾಗಿಲುಗಳನ್ನು ಹಾಕಿಕೊಂಡು ಅವಿತುಕೊಂಡರು. ಈ ಸಮಾಚಾರವು ರಾಜನಿಗೆ ತಿಳಿದು ಅವನು ಆ ಆನೆಯನ್ನು ಹಿಡಿಯುವುದಕ್ಕಾಗಿ ದೊಡ್ಡ ದೊಡ್ಡ ಭಟರನ್ನು ಕಳುಹಿದನು. ಆದರೆ ಅವರಿಂದ ಆನೆಯನ್ನು ವಶಮಾಡಲು ಸಾಧ್ಯವಾಗಲಿಲ್ಲ. ಆ ಸಮಯದಲ್ಲಿ ಜಂಬೂಸ್ವಾಮಿಯು ತನ್ನ ಗೆಳೆಯರೊಡನೆ ಆಟವಾಡುವುದಕ್ಕೋಸ್ಕರ ಆ ಮಾರ್ಗವಾಗಿ ಬಂದನು. ಆನೆಯು ಸೊಂಡಿಲನ್ನು ಎತ್ತಿಕೊಂಡು ಅವನ ಕಡೆಗೆ ಓಡಿ ಬಂದಿತು. ಆಗ ಜೊತೆಗಾರರೆಲ್ಲ ಹೆದರಿ ಓಡಿ ಹೋದರು. ಆದರೆ ಮಹಾಬಲಶಾಲಿಯಾದ ಜಂಬೂಸ್ವಾಮಿಯು ಧೈರ್ಯದಿಂದ ನಿಂತುಕೊಂಡನು. ಪುರನಿವಾಸಿಗಳು ಭಯಭ್ರಾಂತರಾಗಿ "ಇನ್ನೇನು ಗತಿ! ಓಡಿ ಓಡಿ, ಬಾಲಕನನ್ನು ಬಿಡಿಸಿರಿ" ಎಂದು ಕೂಗಾಡಿದರು. ಯಾರೂ ಹತ್ತಿರಕ್ಕೆ ಹೋಗಲಾರದೆ ಹೋದರು. ಅಷ್ಟರಲ್ಲಿ ಜಂಬೂಸ್ವಾಮಿಯು ತನ್ನ ಮೈಮೇಲಿದ್ದ ವಸ್ತ್ರವನ್ನು ತೆಗೆದು ಹೊಸೆದು ಅದರಿಂದ ಆನೆಯ ಮರ್ಮಸ್ಥಾನವನ್ನು ನೋಡಿ ಬಲವಾಗಿ ಹೊಡೆದನು. ಅದರಿಂದ ಆನೆಯ ಸೊಕ್ಕು ಮುರಿದು ಅದು ಓಡಲಾರಂಭಿಸಿತು. ಆಗ ಸ್ವಾಮಿಯು ಅದನ್ನು ಹಿಂಬಾಲಿಸಿ ಬಾಲವನ್ನು ಹಿಡಿದು ಅದರ ಮೇಲೆ ಹತ್ತಿ ಕುಳಿತು ಚೆನ್ನಾಗಿ ಓಡಾಡಿಸಿ ಸಂಪೂರ್ಣವಾಗಿ ಅದರ ಸೊಕ್ಕನ್ನು ಮುರಿದನು. ಸ್ವಾಮಿಯ ಈ ಅದ್ಭುತಸಾಹಸವನ್ನು ನೋಡಿ ದೊರೆಯೂ ಪುರನಿವಾಸಿಗಳೂ ಸಂತೋಷಾಶ್ಚರ್ಯಪರವಶರಾದರು. ಸ್ವಾಮಿಯು ಆನೆಯಿಂದಿಳಿದು ತನ್ನ ಮನೆಗೆ ಹೋದೊಡನೇ ಅವನ ತಂದೆ ತಾಯಿಗಳು ಮಗನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅಪ್ಪಿ ಮುದ್ದಾಡಿ ದೃಷ್ಟಿದೋಷಪರಿಹಾರಾರ್ಥವಾಗಿ ಬೆರಲ್ಗಳ ನಟಕೆ ತೆಗೆದರು. ಅರ್ಹದ್ದಾಸನು "ಮಗು! ಕಂದ!! ತಳಿರಿನಂತೆ ಕೋಮಲವಾದ ಕೈಗಳಿಂದ ಮದಗಜವನ್ನು ನೀನು ಹೇಗೆ ಹಿಡಿದೆ?" ಎಂದು ಕೇಳಿದನು. ಸ್ವಾಮಿಯು ವಿನಯದಿಂದ "ತಂದೆಯೆ! ತಮ್ಮ

ಪಾದಪ್ರಸಾದದಿಂದಲೇ ಆನೆಯನ್ನು ಹಿಡಿದೆನು" ಎಂದು ಉತ್ತರವನ್ನಿತ್ತನು. ಮಹಾಪುರುಷರು ಅಸಮಸಾಹಸಕಾರ್ಯವನ್ನು ಮಾಡಿದರೂ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವುದಿಲ್ಲವಷ್ಟೆ.

ಇತ್ತ ದೊರೆಯು ಜಂಬೂಸ್ವಾಮಿಯನ್ನು ರಾಜಮರ್ಯಾದೆಯಿಂದ ಆಸ್ಥಾನಕ್ಕೆ ಕರೆದುಕೊಂಡು ಬರುವಂತೆ ರಾಜದೂತರನ್ನು ಕಳುಹಿದನು. ಆಗ ಆ ದೂತರು ಬಂದು ವಿನಯದಿಂದ ನಮಸ್ಕರಿಸಿ ಸನ್ಮಾನಪೂರ್ವಕವಾಗಿ ಸ್ವಾಮಿಯನ್ನು ಕರೆದುಕೊಂಡು ರಾಜಾಸ್ಥಾನಕ್ಕೆ ಹೋದರು. ಸ್ವಾಮಿಯುರಾಜಸಭೆಗೆ ಪ್ರವೇಶಮಾಡಿದೊಡನೆಯೇ ರಾಜನೂ ಸಭಿಕರೂ ಎದ್ದು ಸ್ವಾಗತವನ್ನು ಮಾಡಿದರು. ರಾಜನು ಸ್ವಾಮಿಯನ್ನು ತನ್ನ ಅರ್ಧಾಸನದಲ್ಲಿ ಕುಳ್ಳಿರಿಸಿಕೊಂಡು ಪ್ರೀತಿಸಂಭಾಷಣೆಯನ್ನು ಮಾಡಿ ಮುಂದೆ ಪ್ರತಿ ದಿವಸ ರಾಜಮರ್ಯಾದೆಯೊಡನೆ ಆಸ್ಥಾನಕ್ಕೆ ಬರುವಂತೆ ಕೇಳಿಕೊಂಡನು. ಸ್ವಾಮಿಯು "ಹಾಗೆಯೇ ಆಗಲಿ" ಎಂದು ಒಪ್ಪಿಕೊಂಡನು. ತರುವಾಯ ರಾಜನು ಸ್ವಾಮಿಯನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಛತ್ರ ಚಾಮರಾದಿ ರಾಜಮರ್ಯಾದೆಗಳೊಡನೆ ಕಳುಹಿಸಿಕೊಟ್ಟನು.

ಒಂದಾನೊಂದು ದಿವಸ ಅರ್ಹದ್ದಾಸಶ್ರೇಷ್ಠಿಯು ತನ್ನ ಮನೆಯಲ್ಲಿ ಸುಖಾಸನದಲ್ಲಿ ಕುಳಿತಿರುವಾಗ ನಾಲ್ಕು ಮಂದಿ ಬಹಳ ಶ್ರೀಮಂತರಾದ ವೈಶ್ಯರು ಬಂದು ನಮಸ್ಕಾರವನ್ನು ಮಾಡಿ ಬಹಳ ರೂಪವತಿಯರಾದ ತಮ್ಮ ನಾಲ್ಕು ಮಂದಿ ಪುತ್ರಿಯರನ್ನು ಜಂಬೂಕುಮಾರನಿಗೆ ವಿವಾಹಮಾಡಿಕೊಳ್ಳುವಂತೆ ಪ್ರಾರ್ಥಿಸಿಕೊಂಡರು. ಅರ್ಹದ್ದಾಸನು ಅವರಿಗೆ ಯಥೋಚಿತ ಸತ್ಕಾರವನ್ನು ಮಾಡಿ ಕುಳ್ಳಿರಿಸಿ ತಾನು ತನ್ನ ಪತ್ನಿ—ಜಿನಮತಿಯ ಬಳಿಗೆ ಹೋಗಿ ಆ ಸಮಾಚಾರವನ್ನು ತಿಳಿಸಿದನು. ಅದನ್ನು ಕೇಳಿ ಜಿನಮತಿಯು ಬಹುಸಂತುಷ್ಟಳಾಗಿ ಅನುಮತಿಸಿದಳು. ಬಳಿಕ ಅರ್ಹದ್ದಾಸನು ಆ ನಾಲ್ಕು ಮಂದಿ ಶ್ರೇಷ್ಠಿಗಳಿಗೆ ಅವರ ಪುತ್ರಿ

ಯರನ್ನು ತನ್ನ ಮಗನಿಗೆ ವಿವಾಹ ಮಾಡಿಕೊಳ್ಳುವುದಾಗಿ ವಾಗ್ದಾನ ಮಾಡಿದನು. ಸ್ವಾಮಿಯು ಪ್ರತಿದಿನದಂತೆ ರಾಜಾಸ್ಥಾನಕ್ಕೆ ಹೋದನು.

ಅಂಗಕೀಟವೆಂಬ ಪರ್ವತದ ನಿವಾಸಿಯಾದ ಗಗನಗತಿಯೆಂಬ ವಿದ್ಯಾಧರನು ಒಂದು ದಿನ ರಾಜಸಭೆಗೆ ಬಂದು ರಾಜನನ್ನು ಕುರಿತು "ಎಲೈ ದೊರೆಯೆ! ನಮ್ಮ ಅಂಗಕೀಟಪರ್ವತದ ಮೇಲೆ ಕೇರಲಪುರವೆಂಬ ಪಟ್ಟಣವಿದೆ. ಅಲ್ಲಿ ನನ್ನ ಮೈದುನನಾದ ಮೃಗಾಂಕನೆಂಬ ರಾಜನು ಸುಖದಿಂದ ರಾಜ್ಯವಾಳುತ್ತಿದ್ದಾನೆ. ಆತನಿಗೆ ಮಂಜುವೆಂಬ ಬಹು ಸುಂದರಿಯಾದ ಮಗಳಿದ್ದಾಳೆ. ಆಕೆಗೆ ಯಾರು ಪತಿಯಾಗುವನೆಂದು ಮೃಗಾಂಕನು ಮುನೀಶ್ವರರಲ್ಲಿ ಪ್ರಶ್ನೆಮಾಡಿದನು. ಅವರು 'ರಾಜಗೃಹನಗರದ ಶ್ರೇಣಿಕನು ಆಕೆಗೆ ಪತಿಯಾಗುವನು' ಎಂದು ಹೇಳಿದರು. ಆ ವಚನವನ್ನು ಕೇಳಿ ಮೃಗಾಂಕನು ಪುತ್ರಿಯನ್ನು ನಿನಗೆ ಕೊಡಬೇಕೆಂದು ನಿಶ್ಚಯಿಸಿದ್ದನು. ಈ ಸಮಾಚಾರವನ್ನು ರತ್ನಚೂಲನೆಂಬ ದೊರೆಯು ಕೇಳಿ ಮಂಜುವನ್ನು ತನಗೆ ಕೊಡಬೇಕೆಂದೂ ಹಾಗೆ ಕೊಡದಿರುವ ಪಕ್ಷದಲ್ಲಿ ಅಪಾಯವುಂಟಾಗುವುದೆಂದೂ ಮೃಗಾಂಕನ ಬಳಿಗೆ ಹೇಳಿ ಕಳುಹಿಸಿದನು. ಮೃಗಾಂಕನು ಚಿಂತಾಕ್ರಾಂತನಾಗಿ ಕ್ರೋಧದಿಂದ ದೂತನನ್ನು ಕುರಿತು 'ಕನ್ಯೆಯನ್ನು ಶ್ರೇಣಿಕನಿಗೆ ಕೊಡುವುದಾಗಿ ನಿಶ್ಚಿತವಾಗಿದೆ. ರತ್ನಚೂಲನಿಗೆ ಕೊಡಲಾಗುವುದಿಲ್ಲ. ಈ ಮಾತನ್ನು ಹೋಗಿ ಅವನಿಗೆ ತಿಳಿಸು' ಎಂದು ಹೇಳಿದನು. ದೂತನು ಹೋಗಿ ಆ ಮಾತನ್ನು ರತ್ನಚೂಲನಿಗೆ ತಿಳುಹಿದನು. ಅದರಿಂದ ಅವನು ಕ್ರೋಧಿತನಾಗಿ ತನ್ನ ಸೈನ್ಯದೊಡನೆ ಬಂದು ಕೇರಲಪುರವನ್ನು ಮುತ್ತಿ ಮಂಜುವನ್ನು ಅಪಹರಿಸಿಕೊಂಡು ಹೋಗುವುದಕ್ಕಾಗಿ ಹಲವು ತೊಂದರೆಗಳನ್ನು ಕೊಡುತ್ತಿದ್ದಾನೆ. ಆದುದರಿಂದ ಈಗ ನೀನು ಬಂದು ನಿನ್ನ ಮಾವನಿಗೆ ಸಹಾಯ ಮಾಡಬೇಕು" ಎಂದನು. ಆ ಮಾತನ್ನು ಕೇಳಿ ಶ್ರೇಣಿಕಮಹಾರಾಜನು "ಏನು ಮಾಡಲಿ? ರತ್ನಚೂಲನು ಖೇಚರ.

ನಾನು ಭೂಚರ. ದಾರಿಯೂ ವಿಷಮವಾಗಿದೆ. ಹೇಗೆ ಸಾಧ್ಯವಾಗುವುದು ? ಹೋಗದಿದ್ದರೆ ಹೇಡಿಯೆಂದು ಲೋಕವು ನಿಂದಿಸುವುದು. ಮಾನವು ಹೋಗುವುದು. ಒಬ್ಬ ದರಿದ್ರನಾದರೂ ತನ್ನ ಹೆಸರಿಟ್ಟ ವಸ್ತುವನ್ನು ಬಿಡಲಾರನು " ಎಂದು ಚಿಂತಿಸುತ್ತಿದ್ದನು. ಅಷ್ಟರಲ್ಲಿ ಆ ಗಗನಗತಿ—ವಿದ್ಯಾಧರನು ಪುನಃ ಶ್ರೇಣಿಕನನ್ನು ಕುರಿತು "ರಾಜನೆ! ಆ ರತ್ನಚೂಲನು ಬಹುಪರಾಕ್ರಮಿಯಾದ ಖೇಚರನಾಗಿದ್ದಾನೆ—ಸಾಮಾನ್ಯನಲ್ಲ. ಸೈನ್ಯವನ್ನೂ ಬಹಳವಾಗಿ ತಂದಿದ್ದಾನೆ. ದಾರಿಯಾದರೋ ಬಹು ವಿಷಮವಾಗಿದೆ. ಭೂಚರರು ಅಲ್ಲಿಗೆ ಹೋಗಲಾರರು " ಎಂದನು. ಆ ಮಾತನ್ನು ಕೇಳಿ ಜಂಬೂಕುಮಾರನು ಆ ವಿದ್ಯಾಧರನನ್ನು ಕುರಿತು "ಎಲೈ ಮೂರ್ಖನೆ! ಏನು ಹೇಳುತ್ತಿರುವೆ? ಸಭಾಮಧ್ಯದಲ್ಲಿ ರತ್ನಚೂಲನನ್ನು ಹೊಗಳಿ ಶ್ರೇಣಿಕನು ಅವನಿಗಿಂತ ಬಲಹೀನನೆಂದು ತೋರಿಸುತ್ತಿರುವೆ. ಸಂದರ್ಭವೊದಗಿದ ಹೊರತು ಶ್ರೇಣಿಕನಿಂದ ಸಾಧ್ಯವಲ್ಲವೆಂದು ನೀನು ಹೇಗೆ ತಿಳಿದೆ? ಸುಮ್ಮನಿರು. ಇಂತಹ ಮಾತನ್ನು ಸಭೆಯಲ್ಲಿ ಮತ್ತೆ ಹೇಳಬೇಡ " ಎಂದು ಗದರಿಸಿದನು. ಆ ಮಾತನ್ನು ಕೇಳಿ ವಿದ್ಯಾಧರನು "ಎಲೈ ಕುಮಾರನೆ! ನೀನು ಇನ್ನೂ ಬಾಲಕ. ಯುದ್ಧದ ವಿಷಯವು ನಿನಗೆ ತಿಳಿಯದು. ಆತುರಪಡುವುದು ಯೋಗ್ಯವಲ್ಲ. ವ್ಯರ್ಥವಾಗಿ ಮನಸ್ಸನ್ನು ಖೇದಗೊಳಿಸಬೇಡ " ಎಂದನು.

ಆ ವಿದ್ಯಾಧರನ ಮಾತನ್ನು ಕೇಳಿ ಜಂಬೂಸ್ವಾಮಿಯು "ಬೆಂಕಿಯ ಕಿಡಿಯೂ ಕಟ್ಟಿಗೆಯ ಸಮೂಹವನ್ನು ಕ್ಷಣಕಾಲದಲ್ಲಿ ಭಸ್ಮ ಮಾಡಬಲ್ಲುದು. ಸಿಂಹದ ಮರಿಯಾದರೂ ಕ್ಷಣಕಾಲದಲ್ಲಿ ಮತ್ತಗಜದ ಕುಂಭಸ್ಥಳವನ್ನು ಸೀಳಿಬಿಡುವುದು. ಕಡಿವಾಣವು ಚಿಕ್ಕದಾಗಿದ್ದರೂ ಹರಾಮಿಯಾದ ಕುದುರೆಯನ್ನೂ ವಶದಲ್ಲಿರಿಸಬಲ್ಲುದು. ಅಂಕುಶವು ಚಿಕ್ಕದಾಗಿದ್ದರೂ ಆನೆಯನ್ನು ವಶಪಡಿಸಬಲ್ಲುದು. ರಾಮಚಂದ್ರ ಲಕ್ಷ್ಮಣರು ಭೂಚರರಾಗಿದ್ದರೂ ಖೇಚರನಾದ ರಾವಣನನ್ನು ಜಯಿಸಿ ಲಂಕೆ

ಯನ್ನು ವಶಮಾಡಿಕೊಂಡು ಸೀತೆಯನ್ನು ಬಿಡಿಸಿಕೊಂಡು ಬರಲಿಲ್ಲವೇ ? ಎಲೈ ವಿದ್ಯಾಧರನೆ ! ಚಿಕ್ಕದಾದ ಪದಾರ್ಥವು ಹೀನವಾದುದೆಂದು ತಿಳಿಯಬಾರದು" ಎಂದನು. ಈ ರೀತಿಯಾಗಿ ಗಗನಗತಿ—ವಿದ್ಯಾಧರನಿಗೆ ಉತ್ತರವನ್ನು ಹೇಳಿ ಬಳಿಕ ಜಂಬೂಕುಮಾರನು ಶ್ರೇಣಿಕಮಹಾರಾಜನ ಕಡೆಗೆ ತಿರುಗಿ "ಪ್ರಭುವೆ ! ಇದೊಂದು ಕಠಿನವಾದ ಕೆಲಸವಲ್ಲ. ನನಗೆ ಆಜ್ಞೆಯನ್ನು ಕೊಟ್ಟರೆ ನಾನು ಹೋಗಿ ಆ ದುಷ್ಟನ ಅಹಂಕಾರವನ್ನು ಮುರಿದು ಆ ಕನ್ಯೆಯನ್ನು ಕರೆದುಕೊಂಡು ಬರುವೆನು" ಎಂದನು. ಆ ಮಾತನ್ನು ಕೇಳಿ ರಾಜನು ಪ್ರಸನ್ನನಾಗಿ ಜಂಬೂಸ್ವಾಮಿಯ ಪ್ರಾರ್ಥನಾನುಸಾರವಾಗಿ ಅವನಿಗೆ ಆಜ್ಞೆಯನ್ನಿತ್ತು ಬಳಿಕ ಆ ವಿದ್ಯಾಧರನನ್ನು ಕುರಿತು "ಈ ಜಂಬೂಕುಮಾರನನ್ನು ಜಾಗರೂಕತೆಯಿಂದ ಕರೆದುಕೊಂಡು ಹೋಗು' ಎಂದು ಅಪ್ಪಣೆ ಮಾಡಿದನು. ವಿದ್ಯಾಧರನು ಸಂತೋಷದಿಂದ ಒಪ್ಪಿದನು. ಬಳಿಕ ಜಂಬೂಸ್ವಾಮಿಯು ಮನೆಗೆ ಹೋಗಿ ತಂದೆ ತಾಯಿಗಳಿಗೆ ಆ ಸಮಾಚಾರವನ್ನು ತಿಳುಹಿ ಸಮಾಧಾನಪಡಿಸಿ ಅವರ ಅನುಮತಿಯನ್ನು ಪಡೆದು ಆ ವಿದ್ಯಾಧರನೊಡನೆ ವಿಮಾನಾರೂಢನಾಗಿ ಪ್ರಯಾಣವನ್ನು ಮಾಡಿ ಕೇರಲಪುರಕ್ಕೆ ಹೋಗಿ ಅಲ್ಲಿಯ ಸಮಾಚಾರವನ್ನೆಲ್ಲ ಕೇಳಿ ತಿಳಿದನು. ಮೃಗಾಂಕರಾಜನು ಭಯದಿಂದ ಕೋಟೆಯೊಳಗೆ ಅವಿತುಕೊಂಡಿದ್ದಾನೆಂದೂ ರತ್ನಚೂಲನ ಸೈನ್ಯವು ಕೋಟೆಯ ಸುತ್ತಲೂ ಆವರಿಸಿರುವುದೆಂದೂ ಅವನಿಗೆ ತಿಳಿದುಬಂದಿತು. ಆಗ ಜಂಬೂಕುಮಾರನು ದೂತನ ವೇಷವನ್ನು ಧರಿಸಿಕೊಂಡು ರತ್ನಚೂಲನ ಸೈನ್ಯದಲ್ಲಿ ಪ್ರವೇಶಮಾಡಿ ಅವನ ಶಿಬಿರದ ಬಾಗಿಲಿಗೆ ಹೋಗಿ ತಾನು ಮೃಗಾಂಕರಾಜನ ದೂತನೆಂದೂ ವಿವಾಹಸಂಬಂಧವಾಗಿ ರತ್ನಚೂಲನೊಡನೆ ಮಾತನಾಡುವುದಕ್ಕೋಸ್ಕರ ಬಂದಿದ್ದಾನೆಂದೂ ರತ್ನಚೂಲನಿಗೆ ತಿಳಿಸು ಮತೆ ದ್ವಾರಪಾಲಕನಿಗೆ ಹೇಳಿದನು. ಅದರಂತೆ ದ್ವಾರಪಾಲಕನು ಹೋಗಿ ವಿನಯಪೂರ್ವಕವಾಗಿ ರತ್ನಚೂಲನಿಗೆ ತಿಳಿಸಿ ಅವನ ಅನುಮತಿಯನ್ನು

ಪಡೆದು ಈ ಜಂಬೂಸ್ವಾಮಿಯನ್ನು ಒಳಕ್ಕೆ ಕರೆದೊಯ್ದನು. ಸ್ವಾಮಿಯು ಹೋಗಿ ರತ್ನಚೂಲನಿಗೆ ನಮಸ್ಕಾರವನ್ನು ಮಾಡದೆ ಅವನ ಮುಂದೆ ನಿಂತುಕೊಂಡನು. ಆಗ ರತ್ನಚೂಲನು ಈ ವಕ್ರತೆಯನ್ನು ನೋಡಿ " ಎಲೈ ಅಜ್ಞಾನಿಯೆ ! ಯಾವ ಮೂರ್ಖನು ನಿನ್ನನ್ನು ದೂತನನ್ನಾಗಿ ಮಾಡಿದನು ? ನಿನಗೆ ದೂತನ ವ್ಯವಹಾರವೇನೂ ಗೊತ್ತಿಲ್ಲ. ನೀನು ಬಂದು ನಿಯಮಾನುಸಾರವಾಗಿ ನಮಸ್ಕಾರವನ್ನೇಕೆ ಮಾಡಲಿಲ್ಲ ? " ಎಂದು ಕೇಳಿದನು. ಆ ಮಾತನ್ನು ಕೇಳಿ ಕುಮಾರನು ಸ್ವಲ್ಪ ಕ್ರೋಧಿತನಾಗಿ " ನೀತಿಯಿಲ್ಲದ ದೊರೆಗೆ ನಮಸ್ಕಾರವೆಲ್ಲಿಯದು ? " ಎಂದನು. ಅದಕ್ಕೆ ರತ್ನಚೂಲನು " ಎಲೈ ಬಾಲಕನೆ ! ನಿನಗೆ ಯಾವ ಗಾಳಿ ಬೀಸಿತು ? ಒಳ್ಳೆಯದು, ನನ್ನಲ್ಲಿ ನೀತಿಯಿಲ್ಲದಿರುವುದು ಯಾವುದು ? ಹೇಳು. ನೀನು ಬಾಲಕನೆಂದು ತಿಳಿದು ನಿನ್ನನ್ನು ಮನ್ನಿಸಿದ್ದೇನೆ. ಆದರೆ ನೀನು ನಮ್ಮ ಮೇಲೆಯೇ ದೋಷವನ್ನು ಹೊರಿಸುತ್ತಿರುವೆ " ಎಂದನು. ಆ ಮಾತನ್ನು ಕೇಳಿ ಕುಮಾರನು ನಕ್ಕು " ನಿನ್ನ ದೋಷವು ನಿನಗೆ ತೋರುವುದಿಲ್ಲ. ತನ್ನ ಬೆನ್ನು ತನಗೆ ತೋರುವುದೇ ? ತನ್ನ ಹಣೆಯಲ್ಲಿರುವ ತಿಲಕವು ಓರೆಯಾಗಿದೆಯೋ ಸರಿಯಾಗಿದೆಯೋ ಎಂಬುದು ಕನ್ನಡಿಯಿಲ್ಲದೆ ತೋರುವುದೇ ? ಶ್ರೇಣಿಕನಿಗೆ ನಿಶ್ಚಿತಳಾಗಿರುವ ಕನ್ಯೆಯನ್ನು ನೀನು ಅಪಹರಿಸಲು ಬಂದಿರುವುದು ನೀತಿಯೋ ? ವಿದ್ಯಾಧರನೆ ! ದುರಾಗ್ರಹವನ್ನು ಬಿಟ್ಟು ತನ್ನ ದೇಶಕ್ಕೆ ಹೋಗಿ ಸುಖವಾಗಿ ರಾಜ್ಯವನ್ನಾಳಿಕೊಂಡಿರು. ನೋಡು—ರಾವಣ ಕೀಚಕ ಮೊದಲಾದವರು ಪರಸ್ತ್ರೀಲಂಪಟರಾಗಿ ಈ ಭವದಲ್ಲಿ ನಾನಾ ಕಷ್ಟಗಳನ್ನೂ ಆಚಂದ್ರಾರ್ಕವಾದ ಅಪಕೀರ್ತಿಯನ್ನೂ ಹೊಂದಿ ಪರಭವದಲ್ಲಿ ನರಕಾದಿ ದುರ್ಗತಿಯನ್ನು ಪಡೆದರು. ಆದುದರಿಂದ ಈ ನೀತಿಶೂನ್ಯವಾದ ಹಟವು ಒಳ್ಳೆಯದಲ್ಲ, ಬಿಟ್ಟುಬಿಡು " ಎಂದನು. ಆ ಮಾತಿನಿಂದ ರತ್ನಚೂಲನು ಕ್ರೋಧಿತನಾಗಿ ಕುಮಾರನನ್ನು ಕುರಿತು " ಹುಡುಗಾಟವನ್ನು ಮಾಡಬೇಡ. ಇನ್ನೂ ನಿನಗೆ ನನ್ನ

ಪರಾಕ್ರಮವು ಗೊತ್ತಿಲ್ಲ. ನಾನು ಖೇಚರ. ವಿಚಾರವಿಲ್ಲದೆ ಒರಟು ಮಾತುಗಳನ್ನಾಡುವೆ. ಈ ದಿವಸವೇ ನಾನು ಮೃಗಾಂಕನನ್ನು ಬಂಧಿಸಿ ಆತನ ಮಗಳನ್ನು ಮದುವೆ ಮಾಡಿಕೊಳ್ಳುವೆನು. ನೋಡುತ್ತಿರು ನನ್ನ ಸಾಮರ್ಥ್ಯವನ್ನು '' ಎಂದನು.

ಜಂಬೂಕುಮಾರನು ರತ್ನಚೂಲನ ದುರಭಿಮಾನವನ್ನು ನೋಡಿ ಇಂತೆಂದನು "ಎಲೈ ರಾಜನೆ! ಈಗಲೂ ನೀನು ಎಚ್ಚತ್ತುಕೊಳ್ಳುವು ದೊಳ್ಳೆಯದು. ತಿಳಿದೂ ವಿಷವನ್ನು ತಿನ್ನುವುದೊಳ್ಳೆಯದಲ್ಲ. ನೀನು ಆಕಾ ಶಸಂಚಾರಿಯಾದ ಮಾತ್ರದಿಂದ ಏನಾಗುವುದು ? ಕಾಗೆಯೂ ಆಕಾಶ ದಲ್ಲಿ ಸಂಚಾರಮಾಡುವುದು. ಆದರೆ ಬಾಣವು ಸೋಂಕಿದ ಕೂಡಲೆ ಪ್ರಾಣಗಳನ್ನು ಒಪ್ಪಿಸುವುದು. ಆದುದರಿಂದ ನೀನು ನಿನ್ನ ಕ್ಷೇಮವನ್ನು ಬಯಸುವೆಯಾದರೆ ಈ ದುರಾಶೆಯನ್ನು ಬಿಟ್ಟು ಶ್ರೇಣಿಕನ ಬಳಿಗೆ ಹೋಗಿ ಅವನ ಕ್ಷಮೆಯನ್ನು ಕೇಳು. ಇಲ್ಲದಿದ್ದರೆ ನಿನಗೆ ಅಪಾಯವಿದೆ."

ಕುಮಾರನ ಮಾತನ್ನು ಕೇಳಿ ರತ್ನಚೂಲನು ಬಹಳವಾಗಿ ಕೋಪ ಗೊಂಡು "ಈ ಉದ್ಧತನು ನನಗೆ ಮೊದಲು ನಮಸ್ಕಾರ ಮಾಡದಿದ್ದು ದೊಂದು ತಪ್ಪು. ಈಗ ನನ್ನ ಮುಂದೆಯೇ ನನ್ನನ್ನು ನಿಂದಿಸುತ್ತಿರು ವನು. ಈತನನ್ನು ಹಿಡಿದು ಹೊರಕ್ಕೆ ತೆಗೆದುಕೊಂಡು ಹೋಗಿ ಕೊಂದು ಬಿಡಿ" ಎಂದು ತನ್ನ ಭಟರಿಗೆ ಆಜ್ಞೆ ಮಾಡಿದನು. ಅದರಂತೆ ಭಟರು ಜಂಬೂಕುಮಾರನನ್ನು ಹಿಡಿದು ಹೊರಕ್ಕೆ ತಂದರು. ಅದನ್ನು ನೋಡಿ ಎಲ್ಲರೂ ಹಾಹಾಕಾರವನ್ನು ಮಾಡಿ ದುಃಖಪಟ್ಟರು. ಆ ಭಟರೂ ದುಃಖಿಸಿದರು. ಆದರೆ ಮಾಡುವುದೇನು ? ರಾಜಾಜ್ಞೆ. ಸೇವಾವೃತ್ತಿ ಯಲ್ಲಿ ಪರಾಧೀನತೆಯಲ್ಲಿ ನ್ಯಾಯಾನ್ಯಾಯಗಳನ್ನು ವಿಮರ್ಶೆಮಾಡಲು ಎಡೆಯೆಲ್ಲಿರುವುದು ? ಸಂಸಾರದಲ್ಲಿ ಸ್ವಲ್ಪವಾದರೂ ಸುಖವಿರುವುದಾ ದರೆ ಸ್ವಾಧೀನತೆಯಲ್ಲಿ. ಹಾಗೆ ನೋಡಿದರೆ ಕರ್ಮಪರತಂತ್ರರಾಗಿರುವ ವರಿಗೆ ಸಂಸಾರದಲ್ಲಿ ಸುಖವೆಲ್ಲಿ ಬಂತು ? ಈ ಸಂಸಾರಸುಖವು ತೃಣ

ಪ್ರಾಯವೆಂದು ತಿಳಿದು ಸ್ವಾಧೀನವಾದ ನಿತ್ಯಸುಖವನ್ನು ಪಡೆಯುವುದಕ್ಕೋಸ್ಕರ ಪರಾಧೀನತೆಯನ್ನೂ ಸಂಸಾರಬಂಧನವನ್ನೂ ದೂರಮಾಡುವ ಮಹಾಪುರುಷರೇ ಧನ್ಯರು.'' ಈ ರೀತಿಯಾಗಿ ವಿಚಾರ ಮಾಡುತ್ತ ಭಟರು ಜಂಬೂಕುಮಾರನನ್ನು ವಧ್ಯಸ್ಥಾನಕ್ಕೆ ಕರೆದೊಯ್ದು ಕೊಲ್ಲುವುದಕ್ಕೆ ಆಯುಧವನ್ನೆತ್ತಿದರು. ಆಗ ಕುಮಾರನು ತನ್ನ ಕೈಯಲ್ಲಿದ್ದ ವಜ್ರದಂಡದಿಂದ ಆ ಭಟರ ಆಯುಧಗಳನ್ನು ತಡೆದು ಪ್ರತಿಯಾಗಿ ಹೊಡೆದನು. ಅದನ್ನು ತಡೆಯಲಾರದೆ ಆ ಭಟರೆಲ್ಲ ಓಡಿಹೋದರು. ಕುಮಾರನು ಸಿಂಹಗರ್ಜನೆಯನ್ನು ಮಾಡಿ ಆವೇಶದಿಂದ, ಕುರಿಗಳ ಹಿಂಡಿಗೆ ತೋಳನು ನುಗ್ಗುವಂತೆ, ರತ್ನಚೂಲನ ಸೈನ್ಯಕ್ಕೆ ನುಗ್ಗಿ ಎಂಟು ಸಾವಿರ ಸೈನಿಕರನ್ನು ಚಲ್ಲಾಪಿಲ್ಲಿ ಮಾಡಿದನು. ಅನೇಕರು ಗಾಯಗಳನ್ನು ಹೊಂದಿ ಬಿದ್ದರು. ತನ್ನ ಸೈನ್ಯದ ದುರವಸ್ಥೆಯನ್ನೂ ಜಂಬೂಕುಮಾರನ ಅತುಲಪರಾಕ್ರಮವನ್ನೂ ನೋಡಿ ರತ್ನಚೂಲನು ತಾನೇ ಯುದ್ಧಮಾಡಲು ಮುಂದೆ ಬಂದು ನಿಂತನು. ಆಗ ಗಗನಗತಿ-ವಿದ್ಯಾಧರನು ವಿಮಾನವನ್ನೂ ಅನೇಕ ದಿವ್ಯಾಸ್ತ್ರಗಳನ್ನೂ ತಂದು ಜಂಬೂಕುಮಾರನಿಗೆ ಕೊಟ್ಟನು. ಒಂದೆಡೆಯಲ್ಲಿ ಬಹು ಸೈನ್ಯಸಹಿತನಾದ ರತ್ನಚೂಲನೂ ಮತ್ತೊಂದೆಡೆಯಲ್ಲಿ ಏಕಾಕಿಯಾದ ಜಂಬೂಕುಮಾರನೂ ಪರಸ್ಪರವಾಗಿ ಯುದ್ಧಮಾಡಲಾರಂಭಿಸಿದರು. ಇದನ್ನು ಕೋಟೆಯ ಮೇಲೆ ಹತ್ತಿ ನೋಡುತ್ತಿದ್ದ ಮೃಗಾಂಕನ ದೂತರು ಹೋಗಿ ಮೃಗಾಂಕನಿಗೆ ''ಪ್ರಭುವೇ! ಮಹಾಬಲಿಷ್ಠನೂ ಸುಂದರನೂ ತೇಜಸ್ವಿಯೂ ಯುವಕನೂ ಆದ ಭಟನೊರ್ವನು ಬಂದು ರತ್ನಚೂಲನ ಎಂಟು ಸಾವಿರ ಸೈನಿಕರನ್ನು ಓಡಿಸಿ ಈಗ ರತ್ನಚೂಲನೊಡನೆ ಯುದ್ಧಮಾಡುತ್ತಿದ್ದಾನೆ. ಅವನಾರೋ ತಿಳಿಯೆವು. ಒಂದೆಡೆಯಲ್ಲಿ ತನ್ನ ಸಕಲ ಸೇನಾಸಮೇತನಾಗಿ ರತ್ನಚೂಲನೂ ಮತ್ತೊಂದೆಡೆಯಲ್ಲಿ ಏಕಾಕಿಯಾದ ಆ ಯುವಕನೂ ಪರಸ್ಪರವಾಗಿ ಘೋರಯುದ್ಧವನ್ನು ಮಾಡುತ್ತಿದ್ದಾರೆ. ರತ್ನಚೂಲನ ಅನ್ಯಾಯವನ್ನು

ನೋಡಿ ಅವನನ್ನು ಶಿಕ್ಷಿಸುವುದಕ್ಕಾಗಿ ಯಾವನಾದರೂ ದೇವನು ಬಂದಿರುವನೋ ಅಥವಾ ಶ್ರೇಣಿಕನು ತನ್ನ ಕಡೆಯ ಆ ಮಹಾಪರಾಕ್ರಮಿಯನ್ನು ಕಳುಹಿರುವನೋ ತಿಳಿಯೆವು" ಎಂದು ಹೇಳಿದರು. ಆ ಸಮಾಚಾರವನ್ನು ಕೇಳಿ ಮೃಗಾಂಕರಾಜನು ತನ್ನ ಸೈನ್ಯಸಮೇತನಾಗಿ ಯುದ್ಧಕ್ಷೇತ್ರಕ್ಕೆ ಹೋಗಿ ನೋಡಿ ಆಶ್ಚರ್ಯಪರವಶನಾಗಿ ಜಂಬೂಕುಮಾರನನ್ನು ಕುರಿತು "ಸ್ವಾಮಿಯೆ! ತಾವು ರತ್ನಚೂಲನನ್ನು ನೋಡಿಕೊಳ್ಳಿ. ನಾನು ಅವನ ಸೈನ್ಯವನ್ನು ನೋಡಿಕೊಳ್ಳುವೆನು" ಎಂದನು. ರತ್ನಚೂಲನು ಮೃಗಾಂಕನ ಸೇನೆಯು ಬರುತ್ತಿರುವುದನ್ನು ನೋಡಿ ವಿಸ್ಮಿತನಾಗಿ ತನ್ನ ಮಂತ್ರಿಯನ್ನು ಕುರಿತು "ಮುಂದೆ ಬರುತ್ತಿರುವ ಸೈನ್ಯವಾವುದು?" ಎಂದು ಕೇಳಿದನು. ಮಂತ್ರಿಯು "ಪ್ರಭುವೆ! ಮೃಗಾಂಕನು ಸಹಾಯವನ್ನು ಹೊಂದಿ ಸೇನಾಸಹಿತನಾಗಿ ಬರುತ್ತಿದ್ದಾನೆ" ಎಂದನು.

ತರುವಾಯ ಉಭಯಪಕ್ಷದ ಸೈನ್ಯಕ್ಕೆ ಪರಸ್ಪರವಾಗಿ ಘನಘೋರ ಯುದ್ಧವು ನಡೆಯಿತು. ಜಂಬೂಕುಮಾರನು ರತ್ನಚೂಲನನ್ನು ಇದಿರಿಸಿ ಯುದ್ಧಮಾಡಿ ಸ್ವಲ್ಪ ಸಮಯದಲ್ಲೇ ಅವನ ರಥವನ್ನು ಮುರಿದಿಕ್ಕಿ ಆತನನ್ನು ಭೂಮಿಗೆ ಬೀಳಿಸಿದನು. ತತ್ಕ್ಷಣದಲ್ಲಿ ರತ್ನಚೂಲನು ಎದ್ದು ಮತ್ತೊಂದು ರಥವನ್ನು ಹತ್ತುವಷ್ಟರಲ್ಲಿ ಕುಮಾರನು ಬಲವಾಗಿ ಗುದ್ದಿ ಭೂಮಿಯ ಮೇಲೆ ಕೆಡಹಿ ಅವನ ಎದೆಯ ಮೇಲೆ ಕುಳಿತು ಎರಡೂ ಕೈಗಳನ್ನು ಕಟ್ಟಿ ನಿಲ್ಲಿಸಿದನು. ಅದನ್ನು ನೋಡಿ ರತ್ನಚೂಲನ ಸೈನಿಕರೆಲ್ಲ ಭಯಗ್ರಸ್ತರಾಗಿ ಓಡಲಾರಂಭಿಸಿದರು. ಆಗ ಜಂಬೂಕುಮಾರನು ಆ ಸೈನಿಕರಿಗೆಲ್ಲ ಅಭಯಘೋಷಣೆಯನ್ನು ಮಾಡಿಸಿದನು.

ಮೃಗಾಂಕನು ಈ ವಿಜಯವಾರ್ತೆಯನ್ನು ಕೇಳಿ ಶೀಘ್ರವಾಗಿ ಯುದ್ಧವನ್ನು ನಿಲ್ಲಿಸಿ ಜಂಬೂಕುಮಾರನ ಬಳಿಗೆ ಬಂದು ವಿನಯಪೂರ್ವಕವಾಗಿ ನಮಸ್ಕಾರವನ್ನು ಮಾಡಿ "ಸ್ವಾಮಿಯೆ! ತಮ್ಮ ಅನುಗ್ರಹದಿಂದಲೇ ಈ ದಿವಸ ನನ್ನ ವಿಪತ್ತಿಯು ದೂರವಾಯ್ತು. ತಮ್ಮ ಪ್ರತಾ

ಪದಿಂದಲೇ ನನ್ನ ಶುಭೋದಯವಾಯ್ತು. ತಮ್ಮ ಸಾಹಸಪರಾಕ್ರಮುಗಳು ಅದ್ಭುತವಾದುವುಗಳು" ಎಂದು ಮೊದಲಾಗಿ ಸ್ತುತಿಸಿದನು. ಆಗ ಸೈನ್ಯದಲ್ಲೆಲ್ಲ—ಸುತ್ತಲೂ ಜಯಧ್ವನಿಯಾಯ್ತು. ಜಯಭೇರಿನಾದ ಪುಷ್ಪವೃಷ್ಟಿಗಳಾದುವು. ಆಗ ಜಂಬೂಕುಮಾರನು "ಆಹಾ! ಒಂದು ಪ್ರಾಣಿಯನ್ನು ಹಿಂಸಿಸಿದರೂ ಅಧಿಕಪಾಪವಿದೆಯೆಂದು ಶಾಸ್ತ್ರವು ಉದ್ಘೋಷಿಸುವುದು. ಇನ್ನು ಅನೇಕ ಪ್ರಾಣಿಗಳನ್ನು ಯುದ್ಧದಲ್ಲಿ ಹಿಂಸಿಸಿದ ನನಗೆಷ್ಟು ಪಾಪವು ಬಂಧವಾಗಿರುವುದೋ" ಎಂದು ಮನದಲ್ಲಿ ಯೋಚಿಸುತ್ತಿದ್ದನು.

ಗಗನಗತಿವಿದ್ಯಾಧರನು ರತ್ನಚೂಲನನ್ನು ನೋಡಿ "ನೋಡು, ಈ ದಿವಸ ನಮ್ಮ ಮೃಗಾಂಕನು ನಿನ್ನನ್ನು ಜಯಿಸಿದನೋ? ಇಲ್ಲವೋ?" ಎಂದು ಪರಿಹಾಸ್ಯ ಮಾಡಿದನು. ಆ ಮಾತನ್ನು ಕೇಳಿ ರತ್ನಚೂಲನು ಕ್ರೋಧಿತನಾಗಿ "ಎಲೌ! ನಿನ್ನ ಮೃಗಾಂಕನು ನರಿಗೆ ಸಮಾನನು. ನಾನು ಆನೆಗೆ ಸಮಾನನು. ಜಂಬೂಸ್ವಾಮಿಯು ಸಿಂಹಕ್ಕೆ ಸಮಾನನು. ನನ್ನನ್ನು ಜಯಿಸಿದವನು ಸ್ವಾಮಿಯಲ್ಲದೆ ಈ ಪುಲ್ಲ ಮೃಗಾಂಕನೇ?" ಎಂದು ತಿರಸ್ಕಾರವಾಗಿ ಮಾತನಾಡಿದನು. ಆಗ ಮೃಗಾಂಕನು ಕುಪಿತನಾಗಿ ರತ್ನಚೂಲನನ್ನು ಕುರಿತು "ಇನ್ನೂ ನಿನಗೆ ಮನದಲ್ಲಿ ದುರಹಂಕಾರವಿರುವುದಾದರೆ ಈಗಲೂ ಸೈ, ಬಾ ನೋಡೋಣ" ಎಂದು ಮೂದಲಿಸಿದನು. ಆಗ ರತ್ನಚೂಲನು ಜಂಬೂಕುಮಾರನನ್ನು ಕುರಿತು "ಪ್ರಭುವೆ! ದಯೆಯಿಟ್ಟು ಸ್ವಲ್ಪಕಾಲ ನನ್ನನ್ನು ಬಿಡು. ಈಗಲೇ ಈತನಿಗೆ ನನ್ನ ಸಾಮರ್ಥ್ಯದ ಪರಿಚಯವನ್ನು ಮಾಡಿಸಿ ಬಿಡುತ್ತೇನೆ" ಎಂದು ಪ್ರಾರ್ಥಿಸಿದನು. ಅದರಂತೆ ಸ್ವಾಮಿಯು ವಿನೋದಾರ್ಥವಾಗಿ ರತ್ನಚೂಲನ ಬಂಧನವನ್ನು ಬಿಟ್ಟನು. ಆಗ ರತ್ನಚೂಲ ಮೃಗಾಂಕರಿಗೆ ಪರಸ್ಪರ ಯುದ್ಧವು ನಡೆದು ಕೊನೆಗೆ ರತ್ನಚೂಲನು ಮೃಗಾಂಕನನ್ನು ನಾಗಪಾಶದಿಂದ ಬಿಗಿದು ತನ್ನ ಮನೆಗೆ ಒಯ್ಯಲುದ್ಯುಕ್ತನಾದನು.

ನೋಡಿ ಜಂಬೂಕುಮಾರನು ರತ್ನಚೂಲನನ್ನು ಕುರಿತು "ಎಲೈ ದುಷ್ಟನೆ! ನಾನು ನೋಡುತ್ತಿರುವ ಹಾಗೇ ಈತನನ್ನು ಎಲ್ಲಿಗೆ ಒಯ್ಯುತ್ತಿರುವೆ? ಬಿಡು ಬಿಡು. ನಿನ್ನ ಕ್ಷೇಮವನ್ನು ನೀನು ಬಯಸುವೆಯಾದರೆ ಮೃಗಾಂಕನಿಗೆ ನಮಸ್ಕಾರವನ್ನು ಮಾಡು" ಎಂದನು. ಆ ಮಾತನ್ನು ಕೇಳಿ ರತ್ನಚೂಲನು ತನ್ನ ಪೂರ್ವಪರಿಸ್ಥಿತಿಯನ್ನು ಮರೆತು ಕ್ರೋಧಿತನಾಗಿ ಜಂಬೂಕುಮಾರನೊಡನೆ ಪುನಃ ಯುದ್ಧಸನ್ನದ್ಧನಾದನು. ದುಷ್ಟಪ್ರಾಣಿಗಳ ಮೇಲೆ ದಯೆಯನ್ನು ತೋರಿಸಿದರೂ ಅವಕಾಶವು ಸಿಕ್ಕಿದಾಗ ಅವು ತಮ್ಮ ದೌಷ್ಟ್ಯವನ್ನು ಬಿಡುವುದಿಲ್ಲವೆಂಬ ಮಾತು ರತ್ನಚೂಲನ ನಡೆವಳಿಕೆಯಿಂದ ಚರಿತಾರ್ಥವಾಯ್ತು.

ರತ್ನಚೂಲನು ಯುದ್ಧಸನ್ನದ್ಧನಾದುದನ್ನು ನೋಡಿ ಅವನ ಸೈನಿಕರೆಲ್ಲ ಪುನಃ ಉತ್ಸಾಹಿತರಾಗಿ ಅವರೂ ಯುದ್ಧಕ್ಕೆ ಅಣಿಯಾದರು. ಬಳಿಕ ಸೈನ್ಯಸಹಿತನಾದ ರತ್ನಚೂಲನಿಗೂ ಜಂಬೂಸ್ವಾಮಿಗೂ ಪುನಃ ಘೋರಯುದ್ಧವಾಗಿ ಕೊನೆಯಲ್ಲಿ ಸ್ವಾಮಿಯು ರತ್ನಚೂಲನನ್ನು ಹಿಡಿದು ನಾಗಪಾಶದಿಂದ ಬಂಧಿಸಿದನು. ಆಗ ಜಯಭೇರೀನಾದವೂ ಜಯಜಯಕಾರವೂ ಮೃಗಾಂಕನ ಸೈನ್ಯದಲ್ಲಿ ಸಂತೋಷವೂ ರತ್ನಚೂಲನ ಸೈನ್ಯದಲ್ಲಿ ವಿಷಾದವೂ ಏಕಕಾಲದಲ್ಲಿ ಉಂಟಾದುವು. ರತ್ನಚೂಲನ ಸೈನಿಕರು ಭಯಕಂಪಿತರಾಗಿ ಸುತ್ತಲೂ ಓಡಲಾರಂಭಿಸಿದರು. ಆಗ ಸ್ವಾಮಿಯು ಅಭಯಘೋಷವನ್ನು ಮಾಡಿ ಮೃಗಾಂಕನ ಬಂಧನವನ್ನು ಬಿಡಿಸಿ ಬಳಿಕ ತಾನೂ ಮೃಗಾಂಕನೂ ಆನೆಯನ್ನೇರಿ ಉತ್ಸವಪೂರ್ವಕವಾಗಿ ಕೇರಲಪುರಕ್ಕೆ ಪ್ರವೇಶಮಾಡಿದರು. ಆಗ ಮೃಗಾಂಕನು ಜಂಬೂಕುಮಾರನಿಗೆ ಛತ್ರಿಯನ್ನು ಹಿಡಿದು ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿದನು. ಕೇರಲಪುರವು ತಳಿರು ತೋರಣಗಳಿಂದಲೂ ಪತಾಕೆಗಳಿಂದಲೂ ಶೋಭಿತವಾಗಿದ್ದಿತು. ಮುತ್ತೈದೆಯರು ಮಂಗಲಕಲಶಗಳನ್ನೂ ಆರತಿಯನ್ನೂ ಹಿಡಿದು ಸ್ವಾಗತವನ್ನು ಮಾಡುತ್ತಿದ್ದರು. ನಗರದ ಸ್ತ್ರೀಪುರುಷ

ರೆಲ್ಲರೂ ತಂತಮ್ಮ ಕೆಲಸಗಳನ್ನು ಬಿಟ್ಟು ಬಂದು ಆ ಅಭೂತಪೂರ್ವವಾದ ಉತ್ಸವಶೋಭೆಯನ್ನೂ ಜಂಬೂಕುಮಾರನ ಅನುಪಮರೂಪವನ್ನೂ ನೋಡುವುದಕ್ಕಾಗಿ ಅಲ್ಲಲ್ಲಿ ಗುಂಪು ಸೇರಿ "ಈ ಮಹಾಪುರುಷನನ್ನು ನೋಡಿದ ನಮ್ಮ ಕಣ್ಣುಗಳು ಸಫಲವಾದುವು. ಈ ಪುಣ್ಯಾಪುತ್ರನನ್ನು ಪಡೆದ ತಾಯಿತಂದೆಗಳು ಧನ್ಯರು. ಈತನಿಗೆ ಇಂತಹ ಉತ್ತಮವಿದ್ಯೆಯನ್ನು ಕಲಿಸಿದ ಗುರುವು ಧನ್ಯನು. ಈತನ ಕೆಂಬಜ್ಜೆಗಳು ಸೋಂಕುವ ಭೂಮಿಯು ಪವಿತ್ರವಾಗುವುದು. ಈತನು ಧರಿಸಿರುವ ವಸ್ತ್ರಾಭರಣಗಳು ಪವಿತ್ರಗಳಾದುವು. ಈತನು ಜಲಕ್ರೀಡೆಯಾಡುವ ನದೀ ಸರೋವರಗಳು ಧನ್ಯಗಳು" ಎಂದು ಮೊದಲಾಗಿ ಮಾತನಾಡಿಕೊಳ್ಳುತ್ತ ಆಶೀರ್ವದಿಸುತ್ತಿದ್ದರು. ಎಲ್ಲರೂ ಸಂತೋಷದಿಂದ ಕುಮಾರನ ಮೇಲೆ ಪುಷ್ಪವೃಷ್ಟಿಯನ್ನು ಮಾಡುತ್ತಿದ್ದರು. ಈ ರೀತಿಯಾಗಿ ಸ್ವಾಮಿಯು ಎಲ್ಲರಿಗೂ ಅನುಪಮಾನಂದವನ್ನುಂಟುಮಾಡುತ್ತ ಅವರ ಸತ್ಕಾರ ಪುರಸ್ಕಾರಗಳನ್ನು ಹಸನ್ಮುಖಿಯಾಗಿ ಸ್ವೀಕರಿಸುತ್ತ, ದೇವತೆಗಳ ಮಧ್ಯದಲ್ಲಿ ಇಂದ್ರನಂತೆ, ವೈಭವದಿಂದ ಹೋಗುತ್ತಿದ್ದನು. ಒಂದು ಮಾತಿನಿಂದ ಹೇಳುವುದಾದರೆ ಆ ಉತ್ಸವವು ವರ್ಣನಾತೀತವಾಗಿದ್ದಿತು.

ಉತ್ಸವವು ರಾಜಭವನದ ಸಮೀಪಕ್ಕೆ ಹೋದಾಗ ಜಂಬೂಕುಮಾರನು ರತ್ನಚೂಲನ ಬಂಧನವನ್ನು ಬಿಡಿಸಿ ಅವನಿಗೆ ಉತ್ತಮ ವಸ್ತ್ರಾಭರಣಗಳನ್ನು ತೊಡಿಸಿ "ರಾಜನೆ! ನಾನು ಬಂದು ನಿನಗೆ ಬಹಳ ದುಃಖವನ್ನುಂಟುಮಾಡಿದೆನು. ನನ್ನನ್ನು ಕ್ಷಮಿಸು" ಎಂದನು. ಆ ಕೋಮಲವಚನವನ್ನು ಕೇಳಿ ರತ್ನಚೂಲನು ವಿನಯದಿಂದ "ಪ್ರಭುವೆ! ತಾವು ಕ್ಷಮಾಮೂರ್ತಿಯಾಗಿರುತ್ತೀರಿ. ನಾನು ತಮ್ಮನ್ನು ಎಷ್ಟೆಂದು ಪ್ರಶಂಸೆ ಮಾಡಲಿ ? ತಮ್ಮಂತಹ ಮಹಾಪುರುಷನ ದರ್ಶನವು ನನ್ನಂತಹ ದುಷ್ಟನಿಗಾದುದರಿಂದ ನಾನು ಅದೃಷ್ಟಶಾಲಿಯೆಂದು ಭಾವಿಸುತ್ತೇನೆ. ತಮ್ಮ ಅನುಗ್ರಹದಿಂದ ನಾನು ದುರಾಚಾರದಿಂದ ತಪ್ಪಿದೆನು. ತಾವೇ

ನನ್ನನ್ನು ದುರ್ಗತಿಯಿಂದ ತಪ್ಪಿಸಿದವರು.'' ಎಂದು ಮೊದಲಾಗಿ ದೈನ್ಯೋಕ್ತಿಗಳನ್ನು ನುಡಿದನು. ಆ ನುಡಿಗಳಿಂದ ಸ್ವಾಮಿಯು ಬಹಳ ಪ್ರಸನ್ನನಾಗಿ ಮಧುರವಚನಗಳಿಂದ ಆತನನ್ನು ಸಂತೋಷಪಡಿಸಿದನು.

ಮೃಗಾಂಕನ ಪಟ್ಟಮಹಿಷಿಯು ಸ್ವಾಮಿಯ ಆಗಮನವನ್ನು ನೋಡಿ ಬಹುಸಂತುಷ್ಟಳಾಗಿ ಮಂಗಲಕಲಶವನ್ನೂ ಆರತಿಯನ್ನೂ ಹಿಡಿದುಕೊಂಡು ಇದಿರ್ಗೊಂದು ಸ್ವಾಗತವನ್ನು ಮಾಡಿ ಒಳಕ್ಕೆ ಕರೆದುಕೊಂಡು ಹೋಗಿ ಉಪಚರಿಸಿ ಬಳಿಕ "ಸ್ವಾಮಿಯೆ! ಈ ದಿವಸ ನನ್ನ ಮಾಂಗಲ್ಯವನ್ನು ನೀನೇ ಉಳಿಸಿದೆ. ನಿನ್ನ ಪ್ರತಾಪದಿಂದಲೇ ನನಗೆ ನನ್ನ ಪತಿದೇವನ ಪುನರ್ದರ್ಶನವಾಯ್ತು. ತಮ್ಮಂತಹ ಹಿತೈಷಿಗಳು ನಮಗೆ ಮತ್ತಾರೂ ಇಲ್ಲ. ನೀನು ಸ್ವದೇಶವನ್ನು ಬಿಟ್ಟು ಇಲ್ಲಿಗೆ ಬಂದು ನಮಗೆ ಮಹೋಪಕಾರವನ್ನು ಮಾಡಿದೆ. ನಿನ್ನ ಪರೋಪಕಾರಗುಣವೂ ಸಾಹಸವೂ ಅತ್ಯಂತ ಪ್ರಶಂಸನೀಯವಾಗಿವೆ" ಎಂದು ಪ್ರಶಂಸಿಸಿ ಆತನ ಉಪಕಾರವನ್ನು ಬಹಳವಾಗಿ ಸ್ಮರಿಸಿದಳು. ಸ್ವಾಮಿಯೂ ಸಮಯೋಚಿತವಾದ ಮಧುರವಚನಗಳಿಂದ ಸಂತೋಷಪಡಿಸಿದನು. ಬಳಿಕ ಸ್ನಾನಾದಿಕ್ರಿಯೆಗಳನ್ನು ತೀರಿಸಿ ವಿವಿಧ ಭಕ್ಷ್ಯಭೋಜ್ಯಗಳಿಂದ ಕೂಡಿದ ಭೋಜನವನ್ನು ಮಾಡಿ ವಿಶ್ರಾಂತಿಯನ್ನು ಹೊಂದಿ ತರುವಾಯ ರಾಜಗೃಹಕ್ಕೆ ಹೊರಡಲು ಉದ್ಯುಕ್ತನಾದನು. ಆಗ ಮೃಗಾಂಕನೂ ಆತನ ಪತ್ನಿಯೂ ಮತ್ತೆ ಕೆಲವು ದಿನಗಳ ವರೆಗೆ ಇದ್ದು ಹೋಗುವಂತೆ ಪ್ರಾರ್ಥಿಸಿಕೊಂಡರು. ಆದರಂತೆ ಸ್ವಾಮಿಯು ಅನುಮತಿಸಿದನು. ಆಗ ಮೃಗಾಂಕರಾಜನೂ ರತ್ನಚೂಲನೂ ಪರಸ್ಪರವಾಗಿ ಸಮ್ಮಿಲಿತರಾಗಿ ಶ್ರೇಣಿಕನಿಗೆ ಉತ್ತಮವಸ್ತುಗಳ ಕೈಗಾಣಿಕೆಯೊಡನೆ ಆತನಿಗೂ ಕುಮಾರನ ಮಾತಾಪಿತೃಗಳಿಗೂ ಎಲ್ಲಾ ಸಮಾಚಾರವನ್ನು ಹೇಳುವಂತೆ ದೂತರನ್ನು ಕಳುಹಿದರು. ಅವರು ವಿಮಾನಾರೂಢರಾಗಿ ಆಕಾಶಮಾರ್ಗದಲ್ಲಿ ರಾಜಗೃಹಕ್ಕೆ ಹೋಗಿ ಶ್ರೇಣಿಕನಿಗೆ ಕೈಗಾಣಿಕೆಯನ್ನರ್ಪಿಸಿ ಎಲ್ಲಾ ಸಮಾಚಾರಗಳನ್ನು ತಿಳಿಸಿ

ದರು. ಶ್ರೇಣಿಕನು ಬಹಳ ಸಂತುಷ್ಟನಾಗಿ ಆ ಕೈಗಾಣಿಕೆಗಳನ್ನೆಲ್ಲ ಕೊಟ್ಟು ದೂತರನ್ನು ಅರ್ಹದ್ದಾಸನ ಬಳಿಗೆ ಕಳುಹಿಸಿಕೊಟ್ಟನು. ದೂತರು ಹೋಗಿ ಆ ಕೈಗಾಣಿಕೆಗಳನ್ನು ಅರ್ಹದ್ದಾಸನಿಗೂ ಜಿನಮತಿಗೂ ಒಪ್ಪಿಸಿ ಜಂಬೂಕುಮಾರನ ಕುಶಲವಾರ್ತೆಯನ್ನೆಲ್ಲ ತಿಳಿಸಿದರು. ಅದನ್ನು ಕೇಳಿ ಆ ದಂಪತಿಗಳು ಬಹಳ ಸಂತೋಷಪಟ್ಟರು.

ಜಂಬೂಸ್ವಾಮಿಯ ಕುಶಲವಾರ್ತೆಯನ್ನೂ ಪರಾಕ್ರಮವನ್ನೂ ವಿಜಯವಾರ್ತೆಯನ್ನೂ ಕೇಳಿ ಪುರಜನರೂ ತಮ್ಮ ಪುತ್ರಿಯರನ್ನು ಜಂಬೂಕುಮಾರನಿಗೆ ವಿವಾಹ ಮಾಡಿಕೊಳ್ಳಬೇಕೆಂದು ಹೇಳಿ ಅರ್ಹದ್ದಾಸನಿಂದ ವಾಗ್ದಾನವನ್ನು ತೆಗೆದುಕೊಂಡಿದ್ದ ಆ ನಾಲ್ಕುಮಂದಿ ಶ್ರೇಷ್ಠಿಗಳೂ ಅತ್ಯಂತ ಸಂತೋಷಪರವಶರಾದರು. ಎಲ್ಲರೂ ಕುಮಾರನ ಆಗಮನವನ್ನೇ ಕೌತುಕದಿಂದ ಇದಿರುನೋಡುತ್ತಿದ್ದರು. ಕೇರಲಪುರದಲ್ಲಿ ಜಂಬೂಕುಮಾರನು ಹತ್ತು ದಿನಗಳ ವರೆಗೆ ಇದ್ದು ಮೃಗಾಂಕರಾಜ ಮೊದಲಾದವರಿಗೆ ಆಮಂದಾನಂದವನ್ನುಂಟುಮಾಡಿದನು. ಆ ಹತ್ತು ದಿನಗಳು ಕೇರಲಪುರನಿವಾಸಿಗಳಿಗೆ ಹತ್ತು ಗಳಿಗೆಗಳಂತೆ ಸಂತೋಷದಲ್ಲಿ ಕೊನೆಗಂಡುವು. ರಾಜಗೃಹನಿವಾಸಿಗಳಿಗೆ ಹತ್ತು ವರುಷಗಳಂತೆ ಶೋಕದಲ್ಲಿ ಕೊನೆಗಂಡುವು.

ಒಂದು ದಿವಸ ಜಂಬೂಸ್ವಾಮಿಯು ಅಕಸ್ಮಾತ್ ಸಂಸಾರದವೈಚಿತ್ರ್ಯವನ್ನು ಪರಿಭಾವಿಸಿದನು. ಆಗಲೇ ಅವನ ಮನಸ್ಸಿನಲ್ಲಿ ವಿರಕ್ತಿಯು ಅಂಕುರಿಸಿತು. ಅವನಿಗೆ ಶರೀರ ಮೊದಲಾದ ಅನಾತ್ಮೀಯವಸ್ತುಗಳೆಲ್ಲವೂ ನಶ್ವರವಾದುದೆಂದು ತೋರಿತು. ಕೇರಲಪುರದಲ್ಲಿ ಹತ್ತು ದಿನಗಳ ವರೆಗೆ ಇದ್ದುದಾಯ್ತು. ಇನ್ನು ಮನೆಗೆ ಹೋಗಿ ನಿತ್ಯಸುಖದಾಯಕವಾದ ಜಿನದೀಕ್ಷೆಯನ್ನು ತೆಗೆದುಕೊಳ್ಳುವೆನೆಂದು ಸಂಕಲ್ಪಿಸಿ ಹೊರಡಲುದ್ಯುಕ್ತನಾದನು. ಇತ್ತ ವಿದ್ಯಾಧರನು ಮತ್ತೂ ಕೆಲವು ದಿವಸ ಸ್ವಾಮಿಯನ್ನಿರಿಸಿಕೊಳ್ಳಬೇಕೆಂದು ಯೋಚಿಸಿ ಸ್ವಾಮಿಗೆ ಹೋಗಬೇ

ಕೆಂಬ ಸ್ಮರಣೆಯೇ ಉಂಟಾಗದಂತೆ ಮಾಡಬೇಕೆಂದು ನಾನಾ ವಿಧವಾದ ವಿನೋದಗಳನ್ನು ಏರ್ಪಡಿಸಿದನು. ಆದರೂ ಸ್ವಾಮಿಗೆ ಆ ವಿನೋದ ಗೋಷ್ಠಿಗಳಾವುವೂ ಮನೋರಂಜಕಗಳಾಗದೆ ವೈರಾಗ್ಯಭಾವನೆಯೇ ಬೆಳೆಯಿತು. ಮುಮುಕ್ಷುವಾದ ಸ್ವಾಮಿಗೆ ಆ ವಿನೋದಸಾಮಗ್ರಿಯೆಲ್ಲವೂ ವಿಷಕ್ಕೆ ಸಮಾನವಾಗಿಯೂ ತೀಕ್ಷ್ಣವಾದ ಶಸ್ತ್ರಕ್ಕೆ ಸಮಾನವಾಗಿಯೂ ತೋರಿತು. ಆಗ ಕುಮಾರನು ಮೃಗಾಂಕನನ್ನು ಕುರಿತು "ದೊರೆಯೆ! ನಾನು ಇಲ್ಲಿರಬೇಕಾದ ಅವಧಿಯು ಪೂರ್ತಿಯಾಯ್ತು. ಈಗ ನನ್ನನ್ನು ಕಳುಹಿಸಿಕೊಡು." ಎಂದೂ ರತ್ನಚೂಲನನ್ನು ಕುರಿತು "ಅಯ್ಯಾ! ನೀನೂ ನಿನ್ನ ನಗರಕ್ಕೆ ಹೋಗಿ ಪ್ರಜೆಗಳ ಸುಖದುಃಖಗಳನ್ನು ವಿಚಾರಿಸುತ್ತ ಸುಖದಿಂದ ರಾಜ್ಯವಾಳು. ನನ್ನನ್ನು ಕ್ಷಮಿಸು" ಎಂದೂ ಹೇಳಿದನು. ಆ ಮಾತನ್ನು ಕೇಳಿ ಆ ವಿದ್ಯಾಧರರಾಜರೀರ್ವರೂ ತಾವೂ ರಾಜಗೃಹನಗರಕ್ಕೆ ಜಂಬೂಕುಮಾರನೊಡನೆ ಬರುವುದಾಗಿ ಹೇಳಿದರು. ಆಗ ಸ್ವಾಮಿಯು "ಕಳೆದು ಹೋದ ಸಮಯವು ಪುನಃ ಬರುವುದಿಲ್ಲ; ಕಳೆಯುತ್ತಿರುವ ಸಮಯವು ಗೊತ್ತಾಗುವುದಿಲ್ಲ; ಸಮಯವು ಅಮೂಲ್ಯವಾದುದು. ಪ್ರಾಜ್ಞರು ತಾವು ಮಾಡಬೇಕಾದ ಕಾರ್ಯವನ್ನು ಶೀಘ್ರವಾಗಿ ಮಾಡಿಬಿಡಬೇಕು. ಆದುದರಿಂದ ನೀವುಗಳು ಬರುವುದಾದರೆ ಶೀಘ್ರವಾಗಿ ಹೊರಡಿ" ಎಂದನು.

ಜಂಬೂಸ್ವಾಮಿಯ ಆಜ್ಞಾನುಸಾರವಾಗಿ ಅವನೊಡನೆ ಆ ವಿದ್ಯಾಧರರಾಜರೀರ್ವರೂ ತಂತಮ್ಮ ಅಂತಃಪುರಸಮೇತರಾಗಿ ಪುತ್ರಿಯರನ್ನೂ ಕರೆದುಕೊಂಡು ಮಹಾವೈಭವದಿಂದ ಆಕಾಶಮಾರ್ಗದಲ್ಲಿ ರಾಜಗೃಹನಗರಕ್ಕೆ ಬಂದರು. ಶ್ರೇಣಿಕಮಹಾರಾಜನೂ ಪುರಪ್ರಮುಖರೂ ಇದಿರ್ಗೊಂಡು ಜಂಬೂಕುಮಾರನಿಗೆ ಸ್ವಾಗತವನ್ನು ಮಾಡಿ ಪರಸ್ಪರವಾಗಿ ಕುಶಲಪ್ರಶ್ನೆಯನ್ನು ಮಾಡಿದನಂತರ ಎಲ್ಲರೂ ನಗರಪ್ರವೇಶವನ್ನು ಮಾಡಿದರು. ಶ್ರೇಣಿಕನು ಮೊತ್ತಮೊದಲು ಜಂಬೂಕುಮಾರನನ್ನು ತನ್ನ ಅರಮ

ನೆಗೆ ಕರೆದುಕೊಂಡು ಹೋಗಿ ಆಸ್ಥಾನದಲ್ಲಿ ಸಭೆಯನ್ನು ಸೇರಿಸಿ ಒಡ್ಡೋಲಗವನ್ನು ಮಾಡಿ ಜಂಬೂಕುಮಾರನನ್ನು ತನ್ನ ಅರ್ಧಾಸನದಲ್ಲಿ ಕುಳ್ಳಿರಿಸಿ ಸನ್ಮಾನವನ್ನು ಮಾಡಿ ಬಳಿಕ " ಕುಮಾರನೆ ! ನಿನ್ನ ಅನುಗ್ರಹದಿಂದ ನಮಗೆ ಈ ದಿವಸ ಉತ್ತಮವಸ್ತುಗಳ ಪ್ರಾಪ್ತಿಯಾಯ್ತು. ನಮಗೆ ಅಸಾಧ್ಯವಾದ ಕಾರ್ಯವನ್ನು ನೀನು ಸುಲಭವಾಗಿ ಮಾಡಿದೆ " ಎಂದು ಮೊದಲಾಗಿ ಪ್ರಶಂಸೆ ಮಾಡಿದನು. ಕುಮಾರನು ಯಥೋಚಿತವಾಗಿ ಉತ್ತರವನ್ನು ಹೇಳಿ ತನ್ನೊಡನೆ ಬಂದಿದ್ದ ವಿದ್ಯಾಧರರಾಜರ ಪರಿಚಯವನ್ನು ಮಾಡಿಸಿದನು. ಎಲ್ಲರೂ ಪರಸ್ಪರವಾಗಿ ಯೋಗಕ್ಷೇಮವನ್ನು ವಿಚಾರ ಮಾಡಿ ಜಂಬೂಕುಮಾರನ ಅನುಗ್ರಹದಿಂದಲೇ ತಮಗೆ ಈ ಸಂದರ್ಭವೊದಗಿತೆಂದು ಪ್ರಶಂಸೆ ಮಾಡಿದರು. ಬಳಿಕ ಶುಭಮುಹೂರ್ತದಲ್ಲಿ ಮೃಗಾಂಕನ ಪುತ್ರಿ—ಮಂಜುವನ್ನು ಶ್ರೇಣಿಕನಿಗೆ ಕೊಟ್ಟು ವಿವಾಹ ಮಹೋತ್ಸವವನ್ನು ಬಹುವೈಭವದಿಂದ ನಡೆಸಿದರು. ಕೆಲವು ದಿನಗಳವರೆಗೆ ಶ್ರೇಣಿಕನ ಆತಿಥ್ಯದಲ್ಲಿದ್ದು ಸತ್ಕಾರವನ್ನು ಹೊಂದಿ ತರುವಾಯ ಆ ವಿದ್ಯಾಧರರೂ ಜಂಬೂಕುಮಾರನೂ ತಂತಮ್ಮ ಸ್ಥಾನಗಳಿಗೆ ತೆರಳಿದರು. ಎಲ್ಲರೂ ಸುಖದಿಂದ ಕಾಲವನ್ನು ಕಳೆಯುತ್ತಿದ್ದರು. ಜಂಬೂಕುಮಾರನ ವೈರಾಗ್ಯಭಾವನೆಯಾದರೋ ದಿನದಿನಕ್ಕೆ ವೃದ್ಧಿಯನ್ನು ಹೊಂದುತ್ತಲೇ ಇದ್ದಿತು.

ಒಂದಾನೊಂದು ದಿವಸ ಶ್ರೇಣಿಕಮಹಾರಾಜನು ಒಡ್ಡೋಲಗದಲ್ಲಿರುವಾಗ ವನಪಾಲಕನು ಅಕಾಲಫಲಪುಷ್ಪಗಳನ್ನು ತೆಗೆದುಕೊಂಡು ಬಂದು ದೊರೆಗೆ ಒಪ್ಪಿಸಿ ಸಾಷ್ಟಾಂಗನಮಸ್ಕಾರವನ್ನು ಮಾಡಿದನು. ಶ್ರೇಣಿಕನು " ಈ ಅಕಾಲಫಲಪುಷ್ಪಗಳೆಲ್ಲಿಯವು ? " ಎಂದು ಪ್ರಶ್ನೆಮಾಡಿದನು. ವನಪಾಲಕನು ಎದ್ದು ಕೈ ಜೋಡಿಸಿ "ಮಹಾಪ್ರಭುವೆ ! ತಮ್ಮ ಉದ್ಯಾನಕ್ಕೆ ಮಹಾಮಹಿಮಾಶಾಲಿಗಳೂ ದಿವ್ಯಜ್ಞಾನಸಂಪನ್ನರೂ ಆದ ಮುನೀಶ್ವರರೊಬ್ಬರು ದಯೆಮಾಡಿದ್ದಾರೆ. ಅವರ ಪ್ರಭಾವದಿಂದ ಈ

ಫಲಪುಷ್ಪಗಳುಂಟಾಗಿವೆ. ಅರಣ್ಯದಲ್ಲಿರುವ ಹಾವು ಮುಂಗಸಿ, ಗೋವು ಹುಲಿ, ಜಿಂಕೆ ಸಿಂಹ ಮೊದಲಾದ ಜಾತಿವಿರೋಧಿಪ್ರಾಣಿಗಳು ತಮ್ಮ ವಿರೋಧಭಾವವನ್ನು ಬಿಟ್ಟು ಪರಸ್ಪರ ಪ್ರೇಮದಿಂದ ಇರುತ್ತವೆ" ಎಂದು ನಿವೇದಿಸಿದನು. ಶ್ರೇಣಿಕನು ಕೂಡಲೆ ಆಸನದಿಂದೆದ್ದು "ಸಜ್ಜಾತಿಃ ಸದ್ಗೃಹಸ್ಥತ್ವಂ ಪಾರಿವ್ರಾಜ್ಯಂ ಸುರೇಂದ್ರತಾ | ಸಾಮ್ರಾಜ್ಯಂ ಪರಮಾರ್ಹಂತ್ಯಂ ನಿರ್ವಾಣಂ ಚೇತಿ ಸಪ್ತಧಾ" ಎಂಬೀ ಸಪ್ತ ಪರಮಸ್ಥಾನಗಳು ತನಗೆ ಪ್ರಾಪ್ತವಾಗಬೇಕೆಂಬ ಭಾವನೆಯಿಂದ ಏಳು ಹಜ್ಜೆಗಳನ್ನು ಮುಂದಿಟ್ಟು ನಡೆದು ಮುನೀಶ್ವರರಿಗೆ ಪರೋಕ್ಷ ನಮಸ್ಕಾರವನ್ನು ಮಾಡಿ ತಾನು ಧರಿಸಿದ್ದ ವಸ್ತ್ರಾಭರಣಗಳನ್ನು ವನಪಾಲಕನಿಗಿತ್ತು ಸಂತೋಷಪಡಿಸಿ ಬಳಿಕ ಪಟ್ಟಣದಲ್ಲಿ ಡಂಗುರವನ್ನು ಹೊಯ್ಸಿ ಜಂಬೂಕುಮಾರ ಪರಿಜನಪುರಜನಸಮೇತನಾಗಿ ಮುನೀಶ್ವರರ ದರ್ಶನಕ್ಕೋಸ್ಕರ ಹೊರಟು ಹೋದನು. ದೂರದಿಂದ ಮುನೀಶ್ವರರನ್ನು ಕಂಡು ವಾಹನದಿಂದಿಳಿದು ಎಲ್ಲರೂ ಪಾದಚಾರಿಗಳಾಗಿ ಹೋಗಿ ಮುನೀಶ್ವರರಿಗೆ ವಂದನೆಯನ್ನು ಮಾಡಿದರು. ಅವರು "ಧರ್ಮವೃದ್ಧಿರಸ್ತು" ಎಂದು ಆಶೀರ್ವದಿಸಿ ಧರ್ಮದ ಸ್ವರೂಪವನ್ನು ಉಪದೇಶ ಮಾಡಿದರು. ಆಗ ಜಂಬೂಸ್ವಾಮಿಯು ಎದ್ದು ಕೈಜೋಡಿಸಿ ಮುನೀಶ್ವರರನ್ನು ಸ್ತುತಿಸಿ ನಮಸ್ಕರಿಸಿ ತನ್ನ ಪೂರ್ವಭವವೃತ್ತಾಂತವನ್ನು ಕೇಳಿದನು. ಅವಧಿಜ್ಞಾನಸಂಪನ್ನರಾದ ಮುನೀಶ್ವರರು ಮೇಲೆ ಹೇಳಿರುವಂತೆ ಜಂಬೂಕುಮಾರನ ಪೂರ್ವಭವ ವೃತ್ತಾಂತವನ್ನೆಲ್ಲ ವಿಶದವಾಗಿ ತಿಳಿಸಿದರು.

ಜಂಬೂಕುಮಾರನು ಮುನೀಶ್ವರರಿಂದ ತನ್ನ ಪೂರ್ವಭವವೃತ್ತಾಂತವನ್ನು ತಿಳಿದು ಸಂಸಾರ ಶರೀರ ಭೋಗಗಳಲ್ಲಿ ಸಂಪೂರ್ಣವಾಗಿ ವಿರಕ್ತಿಯನ್ನು ಹೊಂದಿ ಮುನೀಶ್ವರರನ್ನು ಕುರಿತು "ಪೂಜ್ಯರೆ! ನಾನು ಈ ಸ್ವಲ್ಪಕಾಲದ ಜೀವನದಲ್ಲೇ ಘೋರಕರ್ಮವನ್ನು ಕಟ್ಟಿಕೊಂಡೆನು. ಈ ಸಂಸಾರವು ಮರುಭೂಮಿಯಂತೆ ನಿಸ್ಸಾರವಾಗಿದೆ. ಅನಾದಿಕಾಲ

ದಿಂದ ಸಂಸಾರಿಜೀವಗಳು ಮೋಹನಿದ್ರಾಪರವಶರಾಗಿ ತಮ್ಮನ್ನು ತಾವು ಮರೆತಿದ್ದಾರೆ. ಅಂತಹ ಜೀವಗಳಿಗೆ ತಾವು ಅಕಾರಣವೈದ್ಯರಾಗಿರುತ್ತೀರಿ. ಕಲ್ಪವೃಕ್ಷದಂತೆ ಅಭೀಷ್ಟವಸ್ತುವನ್ನು ಕೊಡುವವರಾಗಿರುತ್ತೀರಿ. ಕರುಣಾ ಸಮುದ್ರರಾದ ಮಹಾತ್ಮರೆ! ನನ್ನನ್ನು ತಮ್ಮ ಶಿಷ್ಯನನ್ನಾಗಿ ಪರಿಗ್ರಹಿಸಿ ನನಗೆ ದೀಕ್ಷೆಯನ್ನು ದಯೆಪಾಲಿಸಿ ನನ್ನನ್ನು ಈ ಭವಸಾಗರದ ಪಾರ ವನ್ನು ಹೊಂದಿಸಿರಿ '' ಎಂದು ಪ್ರಾರ್ಥಿಸಿದನು. ಕುಮಾರನ ವಚನವನ್ನು ಕೇಳಿ ಮುನೀಶ್ವರರು '' ಬಾಲಕನೆ! ಈಗ ನೀನು ಮನೆಗೆ ಹೋಗಿ ಆಮೇಲೆ ಬಾ· ಆಗ ನಿನಗೆ ದೀಕ್ಷೆಯನ್ನು ಕೊಡುವೆವು.'' ಎಂದು ಹೇಳಿ ದರು. ಆ ನುಡಿಯನ್ನು ಕೇಳಿ ಶ್ರೇಣಿಕನು ಬಹಳ ಸಂತೋಷಪಟ್ಟು ಅದ ನ್ನು ಸಮರ್ಥನ ಮಾಡಿದನು. ತರುವಾಯ ಎಲ್ಲರೂ ಮುನೀಶ್ವರರಿಗೆ ನಮಸ್ಕಾರವನ್ನು ಮಾಡಿ ತಂತಮ್ಮ ಸ್ಥಾನಗಳಿಗೆ ಹೊರಟು ಹೋದರು. ಶ್ರೇಣಿಕನು ಜಂಬೂಕುಮಾರನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಅರಮನೆಗೆ ಹೋಗಿ ಕುಮಾರನನ್ನು ಉಪಚರಿಸಿ ಕಳುಹಿಸಿಕೊಟ್ಟನು. ಜಂಬೂಕುಮಾರನಿಗೆ ಮುನೀಶ್ವರರ ಸಮೀಪದಿಂದ ಹೋಗುವುದಕ್ಕೆ ಇಷ್ಟವಿಲ್ಲದಿದ್ದರೂ ಅವರ ಆಜ್ಞೋಲ್ಲಂಘನೆಯನ್ನು ಮಾಡಲಾರದೆ ಹೊರಟು ಹೋದುದಾಗಿದ್ದಿತು.

ಜಂಬೂಕುಮಾರನು ಮನೆಗೆ ಹೋದೊಡನೆಯೇ ಅವನ ತಂದೆ ತಾಯಿಗಳಿಗೆ ಉಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವರು ಪುತ್ರನನ್ನು ಕುರಿತು '' ಮಗು! ನಿನಗೋಸ್ಕರ ಅಣಿಯಾಗಿರುವ ಈ ಭೋಗೋಪಭೋಗಪದಾರ್ಥಗಳನ್ನು ಭೋಗಿಸಿ ನಮ್ಮ ಕಣ್ಣುಗಳಿಗೆ ಆನಂದವನ್ನುಂಟುಮಾಡು. ನಿನ್ನ ಸುಖ ಸಂತೋಷವೇ ನಮ್ಮ ಸುಖ ಸಂತೋಷ. ಲೋಕದಲ್ಲಿ ತಾಯಿ ತಂದೆಗಳಿಗೆ ಮಗನಿಗಿಂತಲೂ ಪ್ರಿಯ ವಸ್ತುವಾವುದಿರುವುದು ? '' ಎಂದು ಪ್ರೇಮರಸಪರಿಪೂರ್ಣವಾದ ಮಾ ತುಗಳನ್ನಾಡಿದರು. ಆದರೆ ಅವರ ವಚನಾಮೃತವು ಕರ್ಮವೆಂಬ ಕಟ್ಟಿಗೆ

ಯನ್ನು ಸುಡುವುದಕ್ಕೋಸ್ಕರ ಜಂಬೂಸ್ವಾಮಿಯ ಹೃದಯವೆಂಬ ಕುಂಡದಲ್ಲಿ ಉದ್ಭವಿಸಿದ ವೈರಾಗ್ಯವೆಂಬ ಅಗ್ನಿಯನ್ನು ಆರಿಸಲಾರದೆ ಹೋಯ್ತು. ಸಂಸಾರಸುಖದಿಂದ ಪರಾಙ್ಮುಖನಾದ ಜಂಬೂಸ್ವಾಮಿಯು ತಂದೆ ತಾಯಿಗಳ ಆ ಪ್ರೇಮವಚನವನ್ನು ಕೇಳಿ ಇಂತೆಂದನು:—

"ಪೂಜ್ಯಮಾತಾಪಿತೃಗಳೆ! ಈ ಇಂದ್ರಿಯಭೋಗಗಳನ್ನು ನಾವುಗಳು ಅನಾದಿಕಾಲದಿಂದ ಅನುಭವಿಸಿಕೊಂಡು ಬಂದಿದ್ದೇವೆ. ನಾವುಗಳು ಎಷ್ಟೋ ಸಲ ಇಂದ್ರಾದಿಸುಖಸಂಪತ್ತಿಯನ್ನೂ ಅನುಭವಿಸಿದ್ದೇವೆ. ಆದರಿಂದಲೂ ನಮ್ಮಗಳಿಗೆ ತೃಪ್ತಿಯುಂಟಾಗಿಲ್ಲವೆಂದಮೇಲೆ ಮನುಷ್ಯಭವದಲ್ಲಿ ಅಲ್ಪಕಾಲದ ಈ ಕ್ಷುದ್ರಸುಖಸಂಪತ್ತಿಯಿಂದ ತೃಪ್ತಿಯುಂಟಾದೀತೇ? ಎಂದಾದರೂ ಕಟ್ಟಿಗೆಯಿಂದ ಬೆಂಕಿಗೆ ತೃಪ್ತಿಯುಂಟಾದೀತೇ? ಮನುಷ್ಯಭವವೇನೋ ಶ್ರೇಷ್ಠವಾದುದು. ಆದರೆ ನಾವುಗಳು ನರಕತಿರ್ಯಗ್ದೇವಗತಿಗಳಲ್ಲಿ ಸಾಧಿಸಲಾಗದ ಅತೀಂದ್ರಿಯಸುಖವನ್ನು ಹೊಂದಲು ಈ ಮನುಷ್ಯಭವದಲ್ಲಿ ಪ್ರಯತ್ನಿಸಿದರೆ ಈ ಭವದ ಶ್ರೇಷ್ಠತೆಯು ನಮ್ಮ ಭಾಗಕ್ಕೆ ಸಫಲವಾಗುವುದು. ಹಾಗೆ ಮಾಡದಿದ್ದರೆ ನಾವುಗಳು, ಇಷ್ಟಾರ್ಥವನ್ನು ಕೊಡುವ ಚಿಂತಾಮಣಿಯನ್ನು ಕೈಯಿಂದ ಎಸೆದು ಗಾಜಿನ ತುಂಡನ್ನು ಹಿಡಿದುಕೊಳ್ಳುವ ಹುಚ್ಚನಂತೆ, ಮಹಾಮೂರ್ಖರಾಗುವೆವು. ಇಂದ್ರಿಯವಿಷಯಗಳು ನಾಲ್ಕುಗತಿಗಳಲ್ಲಿಯೂ ದೊರೆಯುತ್ತವೆ. ಆದರೆ ಅತೀಂದ್ರಿಯಸುಖದ ಸಾಧನವು ಈ ಮನುಷ್ಯಭವವೇ ಆಗಿರುವುದು. ಆದುದರಿಂದ ಪೂಜ್ಯಮಾತಾಪಿತೃಗಳೇ! ಅವಿನಾಶಿಯೂ ಅನುಪಮವೂ ಆದ ಆತ್ಮಿಕಸುಖವನ್ನು ಹೊಂದುವುದಕ್ಕೆ ಪರಮಸಾಧನವಾದ ಜಿನದೀಕ್ಷೆಯನ್ನು ತೆಗೆದುಕೊಳ್ಳುವುದಕ್ಕೆ ನನಗೆ ಆಜ್ಞೆಯನ್ನು ದಯೆಪಾಲಿಸಿರಿ. ಮನುಷ್ಯಾಯುಷ್ಯವು ಬಹು ಸ್ವಲ್ಪವಾದುದು. ಅದರಲ್ಲಿಯೂ ಎಷ್ಟೋ ಕಾಲವು ಕಳೆದು ಹೋಯ್ತು. ಅದು ಇನ್ನೆಂದೂ ಸಿಕ್ಕತಕ್ಕುದಲ್ಲ. ಉಳಿದ ಆಯುಷ್ಯಭಾಗವೂ, ಕೈಬೊಗಸೆಯಲ್ಲಿರುವ ನೀರು ಬೆರ

ಲ್ಗಳ ಸಂಧಿಯಲ್ಲಿ ಸುರಿದುಹೋಗುವಂತೆ, ಕಳೆದು ಹೋಗುತ್ತಿರುವುದು. ಆದುದರಿಂದಲೇ ಕಾಲದ ಬೆಲೆಯನ್ನು ತಿಳಿದ ಪ್ರಾಜ್ಞರು ಸ್ವಲ್ಪಕಾಲ ವನ್ನೂ ವ್ಯರ್ಥವಾಗಿ ಕಳೆಯುವುದಿಲ್ಲ. ಈಗ ನಾನು ಸಾವಕಾಶ ಮಾಡುವುದು ಉಚಿತವಲ್ಲ. ಈ ದಿವಸವೇ ನಾನು ದೀಕ್ಷೆಯನ್ನು ತೆಗೆದುಕೊಳ್ಳುವೆನು. ನನಗೆ ಆಜ್ಞೆಯನ್ನು ದಯೆಪಾಲಿಸಿರಿ '

ಜಂಬೂಸ್ವಾಮಿಯ ಈ ನುಡಿಗಳು ಸಂಸಾರಿಜೀವರಾಶಿಗೆಲ್ಲ ಅಮೃತದಂತೆ ಹಿತಕರಗಳಾಗಿಯೂ ಕರ್ಮಬಂಧನದಿಂದ ಬಿಡುಗಡೆಯನ್ನು ಹೊಂದಿಸಿ ಆತ್ಮೀಯಸ್ವರಾಜ್ಯದಲ್ಲಿ ಸ್ವಾತಂತ್ರ್ಯಸುಖವನ್ನುಂಟುಮಾಡು ವುವುಗಳಾಗಿಯೂ ಇರುವುವಾದರೂ ಪುತ್ರವ್ಯಾಮೋಹಪಾಶಬದ್ಧರಾದ ಆ ಅರ್ಹದ್ದಾಸ ಜಿನಮತಿಯರ ಹೃದಯಗಳಿಗೆ ಶಲ್ಯಪ್ರಾಯಗಳಾದುವು. ರೋಗಿಗೆ ಅಪಥ್ಯವಸ್ತುವು ಅಭೀಷ್ಟವಾಗಿರುವಂತೆ ಪಥ್ಯವಸ್ತುವು ಅಭೀ ಷ್ಟವಾಗಿರುವುದೇ ?

ಮಗನ ಮಾತುಗಳನ್ನು ಕೇಳಿ ಆ ದಂಪತಿಗಳು ಬಹಳವಾಗಿ ದುಃಖಿತರಾಗಿ "ಎಲೌ ಕಂದ! ಇಂತಹ ಮಾತುಗಳನ್ನೇಕೆ ಹೇಳುತ್ತಿ ರುವೆ? ಕುರುಡನಿಗೆ ಊರುಗೋಲಿನಂತೆ ನೀನು ನಮ್ಮ ವಾರ್ಧಕ್ಯದಲ್ಲಿ ಸಹಾಯಕನಾಗಿರುವೆಯೆಂದು ನಂಬಿಕೊಂಡಿದ್ದೆವು. ನೀನು ನಮಗೆ ಪ್ರಾಣಪ್ರಾಯನಾಗಿರುತ್ತಿ. ಏಕಮಾತ್ರಪುತ್ರನಾಗಿರುವ ನೀನು ನಮ್ಮ ನ್ನು ಬಿಟ್ಟುಹೋದರೆ ನಮಗಾರು ದಿಕ್ಕು? ಅಲ್ಲದೆ ನಿನ್ನ ಬಾಲ್ಯಾವ ಸ್ಥೆಯೂ ಈ ಸುಕುಮಾರಶರೀರವೂ ತಪಸ್ಸಿಗೆ ಯೋಗ್ಯಗಳಲ್ಲ. ಆದುದ ರಿಂದ ಕೆಲವು ಕಾಲದ ವರೆಗೆ ಭೋಗಸುಖಗಳನ್ನನುಭವಿಸಿ ಬಳಿಕ ದೀಕ್ಷೆ ಯನ್ನು ಸ್ವೀಕರಿಸು" ಎಂದು ದೈನ್ಯೋಕ್ತಿಗಳನ್ನು ನುಡಿದರು. ಆಗ ಪರಿಜನ ಪುರಜನರೂ ಕುಮಾರನ ಮೇಲೆ ತಮಗಿರುವ ಪ್ರೇಮಾತಿಶಯ ದಿಂದ ಆತನನ್ನು ಸಂಸಾರಬಂಧನಕ್ಕೆ ಸಿಕ್ಕಿಸತಕ್ಕ ಚತುರೋಕ್ತಿಗಳನ್ನು ತಮತಮಗೆ ತಿಳಿದಂತೆ ನುಡಿದು ಒಡಂಬಡಿಸಲು ಪ್ರಯತ್ನಿಸಿದರು. ಆದರೆ

ಕುಮಾರನ ಮನಸ್ಸು ಸ್ವಲ್ಪವೂ ವಿಚಲಿತವಾಗಲಿಲ್ಲ. ಆಗ ಅರ್ಹದ್ದಾಸನು ಈ ಕುಮಾರನಿಗೆ ತಮ್ಮ ಪುತ್ರಿಯರನ್ನು ಕೊಡುವುದಾಗಿ ನಿಶ್ಚಯಿಸಿಕೊಂಡು ಹೋಗಿದ್ದ ಆ ನಾಲ್ಕು ಮಂದಿ ಶ್ರೇಷ್ಠಿಗಳಿಗೆ ಹೇಳಿಕಳುಹಿದನು. ಅವರು ಈ ಸಮಾಚಾರವನ್ನು ಕೇಳಿ ಶೋಕಾಕುಲರಾಗಿ ತಂತಮ್ಮ ಪುತ್ರಿಯರನ್ನು ಕರೆದು "ಮಗಳೆ! ಜಂಬೂಕುಮಾರನು ವಿರಕ್ತನಾಗಿ ಈ ದಿನವೇ ದೀಕ್ಷೆಯನ್ನು ತೆಗೆದುಕೊಳ್ಳುವನಂತೆ. ಏನೋ ಆದುದಾಯ್ತು. ನಿನಗೆ ಸುಂದರನಾದ ಬೇರೆ ವರನನ್ನು ಹುಡುಕಿ ತರುವೆನು" ಎಂದರು. ಆ ಮಾತುಗಳನ್ನು ಕೇಳಿ ಪ್ರತಿಯೊರ್ವ ಕನ್ಯೆಯೂ "ತಂದೆಯೆ! ಈ ಭವದಲ್ಲಿ ನನಗೆ ಪತಿಯಾದರೆ ಜಂಬೂಕುಮಾರ. ಉಳಿದವರೆಲ್ಲ ನಿನಗೆ (ತಂದೆಗೆ) ಸಮಾನರು. ಆದುದರಿಂದ ಇಂತಹ ಮಾತನ್ನು ನೀನು ಇನ್ನು ಹೇಳಬೇಡ. ಪತಿವ್ರತೆಯರಾದ ಕುಲೀನಸ್ತ್ರೀಯರು ಒಬ್ಬ ಪುರುಷನಿಗೆ ವಿವಾಹಿತರಾಗುವುದು ನಿಶ್ಚಿತವಾದ ಬಳಿಕ ಪ್ರಾಣಗಳು ಹೋದರೂ ಪರಪುರುಷರನ್ನು ಇಚ್ಛಿಸರು. ರಾಜಮತಿ ಮೊದಲಾದ ಸತೀಮಣಿಯರ ಕಥೆಯನ್ನು ನೀನು ಕೇಳಿಲ್ಲವೇ? ಆದುದರಿಂದ ಬೇರೆ ಯೋಚನೆಯನ್ನು ಬಿಟ್ಟುಬಿಡು. ಈಗ ನೀನು ಜಂಬೂಕುಮಾರನ ಬಳಿಗೆ ಹೋಗಿ 'ಕುಮಾರನೆ! ಈ ದಿವಸ ನನ್ನ ಮಗಳನ್ನು ವಿವಾಹ ಮಾಡಿಕೊಂಡು ನಾಳೆ ಪ್ರಾತಃಕಾಲದಲ್ಲೇ ಬೇಕಾದರೆ ದೀಕ್ಷೆಯನ್ನು ತೆಗೆದುಕೊ' ಎಂದು ಹೇಳು. ಅದರ ಮೇಲೆ ನನ್ನ ಅದೃಷ್ಟವನ್ನು ನಾನು ಪರೀಕ್ಷಿಸುವೆನು. ನನ್ನ ಹಣೆಯಲ್ಲಿ ಸುಖವನ್ನೋ ದುಃಖವನ್ನೋ ಅನುಭವಿಸುವುದು ಬರೆಯಲ್ಪಟ್ಟಿದ್ದರೆ ಅದನ್ನು ತಪ್ಪಿಸಲು ಯಾರಿಂದ ಸಾಧ್ಯ? ಆದುದರಿಂದ ಶೀಘ್ರವಾಗಿ ಹೋಗು—ಸಾವಕಾಶವನ್ನು ಮಾಡಬೇಡ" ಎಂದಳು.

ತಮ್ಮ ಪುತ್ರಿಯರ ಸಲಹೆಯು ಆ ಶ್ರೇಷ್ಠಿಗಳಿಗೆ ಸಮ್ಮತವಲ್ಲದಿದ್ದರೂ ನಿರುಪಾಯರಾಗಿ ಸಮ್ಮತಿಸಿ ಜಂಬೂಕುಮಾರನ ಬಳಿಗೆ ಹೋಗಿ

ವಿವಿಧೋಪಾಯಗಳಿಂದ ಆತನ ವೈರಾಗ್ಯಭಾವವನ್ನು ಮುರಿಯಲು ಪ್ರಯತ್ನಿಸಿದರು. ಆದರೆ ಅವನ ಚಿತ್ತವು ಸ್ವಲ್ಪವೂ ಬದಲಾವಣೆಯನ್ನು ಹೊಂದದಿರುವುದನ್ನು ಕಂಡು ಕೊನೆಯಲ್ಲಿ "ಕುಮಾರನೆ! ಈ ದಿವಸ ನಮ್ಮ ಪುತ್ರಿಯರನ್ನು ವಿವಾಹ ಮಾಡಿಕೊಂಡು ನಾಳೆ ಪ್ರಾತಃಕಾಲದಲ್ಲಿ ನೀನು ದೀಕ್ಷೆಯನ್ನು ತೆಗೆದುಕೊ. ಇಷ್ಟಾದರೂ ನಮ್ಮ ಪ್ರಾರ್ಥನೆಯನ್ನು ನೆರವೇರಿಸು" ಎಂದು ಬೇಡಿಕೊಂಡರು. ಜಂಬೂಕುಮಾರನಿಗೆ ಇಚ್ಛೆಯಿಲ್ಲದಿದ್ದರೂ ಆ ಶ್ರೇಷ್ಠಿಗಳ ನಮ್ರತೆಯನ್ನೂ ದುಃಖವನ್ನೂ ನೋಡಿ "ಹಾಗೆಯೇ ಆಗಲಿ" ಎಂದು ಒಪ್ಪಿಕೊಂಡನು. ಬಹುಸಂಭ್ರಮದಿಂದ ವಿವಾಹಕಾರ್ಯವು ನಡೆದುದೂ ಆಯ್ತು. ಆ ದಿನ ರಾತ್ರಿ ಜಂಬೂಕುಮಾರನು ತನ್ನ ಶಯ್ಯಾಗೃಹದಲ್ಲಿ ಮಂಚದಲ್ಲಿ ಸುಪ್ಪತ್ತಿಗೆಯ ಮೇಲೆ ಮಲಗಿರುವ ಕಾಲದಲ್ಲಿ ಈ ನೂತನವಿವಾಹಿತ ಪತ್ನಿಯರು ನಾಲ್ವರೂ ಆ ಶಯ್ಯಾಗೃಹಕ್ಕೆ ಹೋಗಿ ಸ್ತ್ರೀಸ್ವಭಾವಜನ್ಯವಾದ ಲಜ್ಜೆಯನ್ನು ಮೂಲೆಗೊತ್ತಿ ತಂತಮ್ಮ ಚತುರೋಕ್ತಿಗಳಿಂದ ಪತಿಯ ಮನಃಸಂಕಲ್ಪವನ್ನು ಬದಲಾಯಿಸಲು ಪ್ರಯತ್ನಿಸಿದರು. ಆ ಸ್ತ್ರೀಯರಲ್ಲಿ ಒಬ್ಬಳಾದ ಪದ್ಮಶ್ರೀಯು ಪತಿಯನ್ನು ಕುರಿತು "ಪ್ರಿಯನೆ! ನೀನು ನನ್ನ ಮಾತನ್ನು ಕೇಳದಿದ್ದರೆ ನನ್ನ ಪತಿಯು ಮಹಾ ಮೂರ್ಖನೆಂದೂ ನನ್ನನ್ನು ನೋಡುವುದೇ ಇಲ್ಲವೆಂದೂ ಶೃಂಗಾರರಸವನ್ನೂ ಹಾಸ್ಯರಸವನ್ನೂ ತಿಳಿಯುವುದೇ ಇಲ್ಲವೆಂದೂ ಕಲಾಚಾತುರ್ಯವನ್ನೂ ಕೋಕಶಾಸ್ತ್ರವನ್ನೂ ನಾಯಿಕಾಭೇದವನ್ನೂ ತಿಳಿಯುವುದೇ ಇಲ್ಲವೆಂದೂ ನನ್ನ ಸಖಿಯರಲ್ಲೆಲ್ಲ ಹೇಳುವೆನು. ಸವತಿಯರೆ! ನಡೆಯಿರಿ. ನಾವೂ ತಪಸ್ಸನ್ನು ಮಾಡೋಣ. ನಮಗೂ ಸ್ವರ್ಗವು ಸಿಕ್ಕುವುದು. ನಮ್ಮ ಪತಿಯ ವಿವೇಕವನ್ನು ನೋಡಿರಿ--ಬಾಯಾರಿದವನು ನೀರನ್ನು ಬಿಟ್ಟು ಹುಲ್ಲಿನ ಮೇಲಿನ ಹಿಮಜಲವನ್ನು ಬಯಸುವಂತೆ, ಇವನು ಐಹಿಕಸುಖಭೋಗವನ್ನು ಬಿಟ್ಟು ಸ್ವರ್ಗಸುಖವನ್ನು ಬಯಸುತ್ತಾನೆ. ಗರ್ಭದಲ್ಲಿ ಗಂಡುಮಗುವು

ಜನಿಸುವುದೆಂದು ತೊಡೆಯ ಮೇಲಿರುವ ಪುತ್ರನನ್ನು ತೊರೆದು ಬಿಡುವವ ನಿಗಿಂತಲೂ ಮೂರ್ಖನುಂಟೇ ? " ಎಂದು ಪರಿಹಾಸ್ಯಮಾಡಿದಳು. ಆಗ ಇತರ ಮೂರು ಮಂದಿ ಸವತಿಯರೂ " ನೀನು ಹೇಳುವುದು ಸರಿ " ಎಂದರು. ಪದ್ಮಶ್ರೀಯು ಪುನಃ ಪತಿಯನ್ನು ಕುರಿತು ಈ ಮುಂದಿನ ಕಥೆಯನ್ನು ಹೇಳಿದಳು :—

" ಒಂದಾನೊಂದು ಗ್ರಾಮದಲ್ಲಿ ಒಬ್ಬ ರೈತನಿದ್ದನು. ಅವನಿಗೆ ಒಬ್ಬಳು ಹೆಂಡತಿಯೂ ಚೆನ್ನಾಗಿ ದುಡಿಯುವ ಒಬ್ಬ ಮಗನೂ ಇದ್ದರು. ಆ ಹೆಂಡತಿಯು ಅಕಸ್ಮಾತ್ ಸತ್ತು ಹೋದಳು. ತರುವಾಯ ಆ ರೈತ ನು ಮತ್ತೊಂದು ಮದುವೆಯಾದನು. ಕೆಲವು ದಿನಗಳನಂತರ ಆ ಎರಡ ನೆಯ ಹೆಂಡತಿಯು ಗಂಡನನ್ನು ಕುರಿತು " ಮುಂದೆ ನನ್ನ ಹೊಟ್ಟೆಯಲ್ಲಿ ಮಗನು ಹುಟ್ಟಿದರೆ ಅವನನ್ನು ನಿನ್ನ ಮೊದಲನೆಯ ಹೆಂಡತಿಯ ಮಗನು ತನ್ನ ಸೇವಕನೆಂದು ತಿಳಿಯುವನು. ಆದುದರಿಂದ ನೀನು ಅವನನ್ನು ಕೊಲ್ಲಬೇಕು. ಇಲ್ಲದಿದ್ದರೆ ನಾನು ನಿನ್ನೊಡನೆ ಬಾಳುವುದಿಲ್ಲ " ಎಂದು ಕಾಡಿದಳು. ಆ ಮಾತನ್ನು ಕೇಳಿ ರೈತನು ಭಯಕಂಪಿತನಾಗಿ " ಪ್ರಿಯೆ ! ನಾನು ನನ್ನ ಮಗನನ್ನು ಕೊಂದರೆ ನನಗೆ ದೊರೆಯು ಮರಣಶಿಕ್ಷೆಯನ್ನು ಕೊಡುವನು. ಸ್ವಜಾತಿಯವರು ಬಹಿಷ್ಕಾರವನ್ನು ಹಾಕುವರು. ಆದುದರಿಂದ ಈ ನೀಚಕಾರ್ಯವನ್ನು ನಾನು ಹೇಗೆ ಮಾಡಲಿ ? " ಎಂದನು. ಅದಕ್ಕೆ ಆ ಸ್ತ್ರೀಯು " ಪ್ರಿಯನೆ ! ನಾನು ನಿನಗೊಂದು ಉಪಾಯವನ್ನು ಹೇಳುತ್ತೇನೆ. ಅದರಂತೆ ಮಾಡು. ಉಪಾ ಯವಾವುದೆಂದರೆ— ನಾಳೆ ಬೆಳಗ್ಗೆ ನೀನು ಎರಡು ನೇಗಿಲುಗಳನ್ನು ತೆಗೆದುಕೊಂಡು ನಿನ್ನ ಮಗನನ್ನು ಕರೆದುಕೊಂಡು ಹೊಲಕ್ಕೆ ಹೋಗ ಬೇಕು. ಒಂದು ನೇಗಿಲಿಗೆ ಎತ್ತುಗಳನ್ನು ಕಟ್ಟಿ ನಿನ್ನ ಮಗನಿಗೆ ಕೊಟ್ಟು ಅವನು ಮುಂದೆ ಉಳುತ್ತ ಹೋಗಬೇಕು. ಮತ್ತೊಂದು ನೇಗಿಲಿಗೆ ಎತ್ತುಗಳನ್ನು ಕಟ್ಟಿ ಹಿಂದಿನಿಂದ ನೀನು ಉಳುತ್ತ ಹೋಗಬೇಕು.

ಸಮಯವನ್ನು ನೋಡಿ ನಿನ್ನ ಎತ್ತಿಗೆ ಹೊಡೆಯಬೇಕು. ಆಗ ಅದು ಮುಂದೆ ಹೋಗಿ ಕೊಂಬಿನಿಂದ ನಿನ್ನ ಮಗನನ್ನು ತಿವಿಯುವುದು. ಅದನ್ನೇ ನೆವಮಾಡಿಕೊಂಡು ನೀನು ನಿನ್ನ ಮಗನನ್ನು ಹೊಡೆದು ಕೊಲ್ಲಬೇಕು. ಆ ಮೇಲೆ 'ಅಯ್ಯೋ! ಓಡಿ ಬನ್ನಿ. ನನ್ನ ಮಗನನ್ನು ಎತ್ತು ತಿವಿದು ಕೊಂದಿತು' ಎಂದು ಕಿರಿಚಿಕೊಳ್ಳಬೇಕು. ಹೀಗೆ ಮಾಡಿದರೆ ಯಾರಿಗೂ ಗೊತ್ತಾಗುವುದಿಲ್ಲ" ಎಂದಳು.

ಆ ಮೂರ್ಖನಾದ ರೈತನು ಹೆಂಡತಿಯ ಮಾತಿಗೆ ಒಪ್ಪಿದನು. ಆದರೆ ಮಗನು ಮರೆಯಲ್ಲಿದ್ದು ಆ ಮಾತುಗಳನ್ನು ಕೇಳಿಸಿಕೊಂಡನು. ಬೆಳಗಾದೊಡನೆ ರೈತನು ಮಗನನ್ನು ಕರೆದು ಹೊಲಕ್ಕೆ ಹೋಗಿ ಆರು ಕಟ್ಟುವಂತೆ ಹೇಳಿದನು. ಮಗನು ಮುಂದಾಗಿ ಹೋಗಿ ನೇಗಿಲಿಗೆ ಎತ್ತುಗಳನ್ನು ಕಟ್ಟಿ ಮೊದಲು ಉತ್ತು ಬಿತ್ತಿ ಬೆಳೆದು ಕೊಯ್ಲಿಗೆ ಬಂದಿದ್ದ ಹೊಲದಲ್ಲಿ ಉಳುವುದಕ್ಕಾರಂಭಿಸಿದನು. ಅಷ್ಟರಲ್ಲಿ ತಂದೆಯು ಬಂದು ನೋಡಿ ಕ್ರೋಧಿತನಾಗಿ "ಎಲಾ ಮೂರ್ಖನೆ! ಇದೇನು ಮಾಡುತ್ತಿರುವೆ? ನಾಲ್ಕು ತಿಂಗಳುಗಳ ವರೆಗೆ ಜೀವನವಾಗುವ ಬೆಳೆಯನ್ನು ಹಾಳುಮಾಡಿದೆಯಲ್ಲ" ಎಂದನು. ಆ ಮಾತನ್ನು ಕೇಳಿ ಮಗನು "ತಂದೆಯೆ! ಈ ಬೆಳೆ ಹೋದರೆ ಏನಾಯ್ತು? ಈಗ ನಾವು ಉತ್ತು ಬಿತ್ತುತ್ತೇವಲ್ಲ! ಇದನ್ನು ಇನ್ನು ನಾಲ್ಕು ತಿಂಗಳನಂತರ ಊಟಮಾಡಿದರಾಯ್ತು" ಎಂದನು. ಅದಕ್ಕೆ ತಂದೆಯು "ಎಲಾ ಮಗನೆ! ನೀನು ಮಹಾ ಮೂರ್ಖನಾಗಿರುತ್ತಿ. ಬೆಳೆದು ಸಿದ್ಧವಾಗಿರುವ ಬೆಳೆಯನ್ನು ಮಣ್ಣುಪಾಲು ಮಾಡಿ ಮುಂದೆ ಬೆಳೆಯುವುದೆಂದು ಹೇಳುತ್ತಿರುವೆಯಲ್ಲ! ಮುಂದೆ ಬೆಳೆಯುವುದರಲ್ಲಿ ನಂಬಿಕೆಯೇನು?" ಎಂದನು. ಈ ಮಾತನ್ನು ಕೇಳಿ ಮಗನು ಸಮಯವು ಸಿಕ್ಕಿತೆಂದು ಭಾವಿಸಿ ತಂದೆಯನ್ನು ಕುರಿತು "ತಂದೆಯೆ! ಹಾಗಾದರೆ ನನ್ನನ್ನು ನೀನು ಕೊಂದ ಮೇಲೆ ನಿನಗೆ ಮುಂದೆ ಮಗನು ಹುಟ್ಟುವನೆಂಬುದರಲ್ಲಿ ನಂಬಿಕೆಯೇನು?"

ಎಂದನು. ಆ ಮಾತನ್ನು ಕೇಳಿ ರೈತನು ನಾಚಿಕೆಯಿಂದ ಮುಖವನ್ನು ಬಗ್ಗಿಸಿದನು. ನಿನಗೆ ಪೂರ್ವಸುಕೃತದಿಂದ ಹೇರಳವಾದ ಸಂಪತ್ತಿಯೂ ಸುಂದರ ಯುವತಿಯರಾದ ನಮ್ಮ ಭೋಗವೂ ಪ್ರಾಪ್ತವಾಗಿರುವುದು. ಸ್ವರ್ಗದಲ್ಲಿ ಸುಖವು ದೊರೆಯುವುದೆಂದು ಈಗ ದೊರಕಿರುವ ಈ ಸುಖವನ್ನು ತ್ಯಜಿಸುವುದು, ಆ ರೈತನು ಸಮರ್ಥನಾದ ಮಗನನ್ನು ಕೊಂದು ಮುಂದೆ ಪುತ್ರನನ್ನು ಪಡೆಯುವೆನೆಂಬ ದುರಾಶೆಯಂತಾಗುವುದು."

ಈ ರೀತಿಯಾಗಿ ಪದ್ಮಶ್ರೀಯು ಹೇಳಿದುದನ್ನು ಕೇಳಿ ಜಂಬೂಕುಮಾರನು ಆಕೆಯನ್ನು ಕುರಿತು "ಎಲೈ ಪದ್ಮಶ್ರೀಯೆ! ಕೇಳು, ಒಂದು ಹೊಳೆಯ ದಡದಲ್ಲಿ ಒಂದು ಆನೆಯು ಸತ್ತು ಬಿದ್ದಿತ್ತು. ಆ ಹೆಣವನ್ನು ಅನೇಕ ಕಾಗೆಗಳು ಕುಕ್ಕಿ ತಿನ್ನುತ್ತಿದ್ದುವು. ಅಕಸ್ಮಾತ್ ಹೊಳೆಯಲ್ಲಿ ಪ್ರವಾಹವು ಬಂದು ಅದರಲ್ಲಿ ಆ ಹೆಣವು ಕೊಚ್ಚಿ ಹೋಯಿತು. ಆಗ ಕಾಗೆಗಳೆಲ್ಲ ಹಾರಿಹೋದುವು. ಬಹು ಲೋಭಿಯಾದ ಒಂದು ಕಾಗೆಯು ಮಾತ್ರ ಆ ಹೆಣದ ಮೇಲೆ ಕುಳಿತು ಮಾಂಸವನ್ನು ಕುಕ್ಕಿ ತಿನ್ನುತ್ತ ಅದರೊಡನೆ ತೇಲಿ ಹೋಗುತ್ತಿತ್ತು. ಆ ಹೆಣವು ತೇಲಿಕೊಂಡು ಸಮುದ್ರದ ನಡುವಿಗೆ ಹೋಯಿತು. ಅಲ್ಲಿ ಒಂದು ನೆಗಳೆಯು ಆ ಹೆಣವನ್ನು ನುಂಗಿತು. ಆಗ ಆ ಕಾಗೆಯು ಎದ್ದು ಆ ಕಡೆ ಈ ಕಡೆ ಹಾರಾಡಿತು. ಎಲ್ಲಿ ನೋಡಿದರೂ ನೀರೇ ಕಂಡುಬಂದಿತು. ಕಾಗೆಯು ಹಾರಾಡಿ ಸಾಕಾಗಿ ಕೊನೆಗೆ ಸಮುದ್ರದಲ್ಲಿ ಬಿದ್ದು ಸತ್ತಿತು. ಆ ಕಾಗೆಯೂ, ಬೇರೆ ಕಾಗೆಗಳಂತೆ, ಮೊದಲೇ ಹಾರಿ ಹೋಗಿದ್ದರೆ ಪ್ರಾಣಗಳನ್ನೇಕೆ ಕಳೆದುಕೊಳ್ಳುತ್ತಿತ್ತು? ಅದರಂತೆ ವಿಷಯಾಸಕ್ತನಾದವನು ಭವವೆಂಬ ಸಮುದ್ರದ ನಡುವಿಗೆ ಒಯ್ಯಲ್ಪಟ್ಟು ಅಪಾರದುಃಖಕ್ಕೀಡಾಗುವನೆಂಬುದು ನಿಶ್ಚಯ" ಎಂದು ಹೇಳಿದನು. ಆ ಮಾತನ್ನು ಕೇಳಿ ಪದ್ಮಶ್ರೀಯು ನಿರುತ್ತರಳಾದಳು.

ಬಳಿಕ ಕನಕಶ್ರೀಯೆಂಬ ಪತ್ನಿಯು ಪತಿಯನ್ನು ಕುರಿತು "ಸ್ವಾಮಿಯೆ! ಕೇಳು, ಒಂದು ಪರ್ವತದ ಮೇಲೆ ಒಂದು ಕಪಿಯು ವಾಸಮಾಡಿಕೊಂಡಿತ್ತು. ಒಂದಾನೊಂದು ದಿವಸ ಅದು ಅಕಸ್ಮಾತ್ ಕಾಲು ಜಾರಿ ಕೆಳಕ್ಕೆ — ಕಲ್ಲಿನ ಮೇಲೆ ಬಿದ್ದು ಸತ್ತು ಕರ್ಮ ಸಂಯೋಗದಿಂದ ಖೇಚರನಾಗಿ ಹುಟ್ಟಿತು. ಒಂದು ದಿನ ಆ ಖೇಚರನು ದಿವ್ಯಜ್ಞಾನಸಂಪನ್ನರಾದ ಮುನೀಶ್ವರರ ಬಳಿಗೆ ಹೋಗಿ ತನ್ನ ಪೂರ್ವಭವದ ವೃತ್ತಾಂತವನ್ನು ಕೇಳಿದನು. ಅವರು ಅವನ ಪೂರ್ವಭವ ವೃತ್ತಾಂತವನ್ನು ವಿಶದವಾಗಿ ತಿಳುಹಿದರು. ಅದನ್ನು ಕೇಳಿ ಅವನು ತನ್ನ ಮನೆಗೆ ಹೋಗಿ ಹೆಂಡತಿಯನ್ನು ಕರೆದು ತಾನು ಪೂರ್ವದಲ್ಲಿ ಕಪಿಯಾಗಿದ್ದೆನೆಂದೂ ಪರ್ವತದಿಂದ ಕಲ್ಲಿನ ಮೇಲೆ ಬಿದ್ದು ಸತ್ತು ಮನುಷ್ಯನಾಗಿ ಹುಟ್ಟಿರುವೆನೆಂದೂ ಈಗ ಪುನಃ ಪರ್ವತದಿಂದ ಬಿದ್ದು ಸತ್ತರೆ ದೇವನಾಗಿಹುಟ್ಟುವೆನೆಂದೂ ಹೇಳಿದನು. ಆಗ ಆತನ ಹೆಂಡತಿಯು "ಅಯ್ಯೋ! ಹುಚ್ಚ!! ಏನೋ ಪುಣ್ಯದಿಂದ ಮನುಷ್ಯನಾಗಿ ಹುಟ್ಟಿರುತ್ತಿ. ಈಗ ಉದ್ದೇಶಪೂರ್ವಕವಾಗಿ, ನನಗೂ ದುಃಖವನ್ನುಂಟುಮಾಡಿ, ಆತ್ಮಘಾತವನ್ನು ಮಾಡಿಕೊಂಡರೆ ದುರ್ಗತಿಯಾಗುವುದಲ್ಲದೆ ಎಂದಿಗೂ ದೇವಗತಿಯಾಗದು" ಎಂದು ಬಹಳವಾಗಿ ವಿವೇಕವನ್ನು ಹೇಳಿದರೂ ಕೇಳದೆ ಆ ಮೂರ್ಖನು ಹೋಗಿ ಬೆಟ್ಟದ ತಪ್ಪಲಿನಿಂದ ಬಿದ್ದು ಸತ್ತು ಪುನಃ ಕಪಿಯಾಗಿ ಹುಟ್ಟಿ ದುಃಖಕ್ಕೀಡಾದನು. ಹಾಗೆ ನೀನೂ ಮುಂದೆ ಹೆಚ್ಚು ಸುಖವು ದೊರೆಯುವುದೆಂದು ಬಗೆದು ಈಗ ದೊರಕಿರುವ ಸುಖವನ್ನು ಬಿಟ್ಟು ಹೀಗೆ ಹಟಮಾಡುವುದು ಉಚಿತವಲ್ಲ" ಎಂದಳು.

ಕನಕಶ್ರೀಯ ಮಾತನ್ನು ಕೇಳಿ ಜಂಬೂಸ್ವಾಮಿಯು ಆಕೆಯನ್ನು ಕುರಿತು "ಎಲೌ! ಕೇಳು, ವಿಂಧ್ಯಪರ್ವತದ ಮೇಲೆ ಒಂದು ಕಪಿಯು ವಾಸಮಾಡಿಕೊಂಡಿತ್ತು. ಅದು ಬಹಳ ಕಾಮಾತುರವಾಗಿ ಬೇರೆ ಗಂಡು ಕಪಿಗಳನ್ನು ಕೊಂದು ತಾನು ಕಾಮಸೇವನೆಯನ್ನು ಮಾಡಿಕೊಂಡಿತ್ತು.

ತನಗೆ ಹುಟ್ಟಿದ ಮರಿಗಳನ್ನೂ ಕೊಂದು ಹಾಕುತ್ತಿತ್ತು. ಆದರೆ ಒಂದಾನೊಂದು ಹೆಣ್ಣು ಕಪಿಯಲ್ಲಿ ಹುಟ್ಟಿದ ಒಂದು ಗಂಡು ಮರಿಯು ಅದೊಂದು ಕಡೆಯಲ್ಲಿ ಬೆಳೆಯುತ್ತಿದ್ದುದು ಆ ಕಾಮುಕವಾದ ಕಪಿಯು ಗೋಚರಕ್ಕೆ ಬರಲಿಲ್ಲ. ಆ ಮರಿಯು ಬೆಳೆಯುತ್ತ ಯೌವನಾವಸ್ಥೆಗೆ ಬಂದಿತು. ಆ ಕಾಮುಕವಾದ ಕಪಿಯಾದರೋ ವಾರ್ಧಕ್ಯಾವಸ್ಥೆಗೆ ಬಂದಿತು. ಆ ಯುವಕ ಕಪಿಯ ಇಂದ್ರಿಯಗಳು ಬಲಿಯುತ್ತ ಬಂದುವು. ವೃದ್ಧಕಪಿಯ ಇಂದ್ರಿಯಗಳು ಶಿಥಿಲವಾಗುತ್ತ ಬಂದುವು. ಒಂದಾನೊಂದು ದಿವಸ ಆ ಕಪಿಗಳೆರಡೂ ಒಂದು ಕಡೆಯಲ್ಲಿ ಸಂಧಿಸಿ ಪರಸ್ಪರವಾಗಿ ಕಾದಾಡಿದುವು. ಆ ಮುದಿಕೋತಿಯು ಸೋತು ಓಡಿಹೋಗಿ ಬಾಯಾರಿ ಬೆಂಡಾಗಿ ನೀರನ್ನು ಕುಡಿಯುವುದಕ್ಕೋಸ್ಕರ ಒಂದು ಹಳ್ಳದಲ್ಲಿ ಹೊಕ್ಕು ಕೆಸರಿನಲ್ಲಿ ಕಾಲುಗಳು ಸಿಕ್ಕಿಕೊಂಡು ಅಲ್ಲೇ ಒದ್ದಾಡಿ ಸತ್ತುಹೋಯ್ತು. ಹೀಗೆ ಭೋಗತೃಷ್ಣಾಪರವಶವಾದ ಆ ಕಪಿಯು ಕೆಸರಿನಲ್ಲಿ ಸಿಕ್ಕಿ ಅಧಿಕದುಃಖವನ್ನನುಭವಿಸಿತು. ಚತುರ್ಗತಿಗಳಲ್ಲಿ ಮುಳುಗಿರುವ ನನ್ನನ್ನು ಎತ್ತಲು ಸಮರ್ಥರಾರು?'' ಎಂದು ಹೇಳಿ ಕನಕಶ್ರೀಯನ್ನು ನಿರುತ್ತರಳನ್ನಾಗಿ ಮಾಡಿದನು.

ತರುವಾಯ ವಿನಯಶ್ರೀಯೆಂಬ ಪತ್ನಿಯು ಸ್ವಾಮಿಯನ್ನು ಕುರಿತು '' ಸ್ವಾಮಿಯೆ! ಕೇಳು, ಒಂದು ಊರಿನಲ್ಲಿ ಒಬ್ಬ ಸೌದೆಸೀಳುವವನಿದ್ದನು. ಅವನು ಹೊಟ್ಟೆಗೂ ಸರಿಯಾಗಿ ತಿನ್ನದೆ ಪ್ರತಿದಿನವೂ ಸ್ವಲ್ಪಸ್ವಲ್ಪವಾಗಿ ದ್ರವ್ಯವನ್ನು ಉಳಿಸಿ ಕೂಡಿಟ್ಟು ಅದರಿಂದ ಒಂದು ಉಂಗುರವನ್ನು ಮಾಡಿಸಿದನು. ಅದು ಆಪತ್ಕಾಲದಲ್ಲಿ ಸಹಾಯಕವಾದೀತೆಂದು ಅದನ್ನು ಒಂದು ಕಡೆ—ಭೂಮಿಯಲ್ಲಿ ಹುಗಿದಿಟ್ಟನು. ಒಂದು ದಿನ ಒಬ್ಬ ವ್ಯಾಪಾರಿಯು ಪರದೇಶಕ್ಕೆ ಹೊರಟು ಹೋಗುವ ಸಮಯದಲ್ಲಿ ತನ್ನಲ್ಲಿದ್ದ ದ್ರವ್ಯವನ್ನು ಅದೇ ವನದಲ್ಲಿ ಹುಗಿದಿಟ್ಟು ಹೋದನು. ಅದನ್ನು ಮರೆಯಲ್ಲಿದ್ದ ಆ ಸೌದೆಸೀಳುವವನು ನೋಡಿ ಅಗೆದು ಆ

ದ್ರವ್ಯವನ್ನು ತೆಗೆದು ನೋಡಿ ಸಂತುಷ್ಟನಾಗಿ ತನ್ನ ಉಂಗುರ ವನ್ನೂ ಅದರಲ್ಲಿ ಸೇರಿಸಿ ಪುನಃ ಹುಗಿದಿಟ್ಟನು. ಅವನು ಹುಗಿದಿಡುವು ದನ್ನು ಮತ್ತೊಬ್ಬ ಮನುಷ್ಯನು ಮರೆಯಲ್ಲಿದ್ದು ನೋಡಿ ಬಳಿಕ ಅದೆಲ್ಲ ವನ್ನೂ ದೋಚಿಕೊಂಡು ಹೋದನು. ಕೆಲವು ದಿನಗಳನಂತರ ಆ ಸೌದೆ ಸೀಳುವವನು ಬಂದು ನೋಡಲಾಗಿ ಆ ದ್ರವ್ಯವೂ ತನ್ನ ಉಂಗುರವೂ ಇರಲಿಲ್ಲ. ಆಗ ಅವನು "ಹಾ! ಅಯ್ಯೋ!! ಅನಾಯಾಸವಾಗಿ ದೊರೆತ ದ್ರವ್ಯವು ಹೋದುದಲ್ಲದೆ ಅದರೊಡನೆ ನಾನು ಕಷ್ಟಪಟ್ಟು ಸಂಪಾದಿಸಿದ ಉಂಗುರವೂ ಹೋಯಿತಲ್ಲಾ!" ಎಂದು ದುಃಖಿಸಿದ ನಂತೆ. ಸುಖಸಾಮಗ್ರಿಯಿದ್ದರೂ ಅದರಿಂದ ತೃಪ್ತಿಯನ್ನು ಹೊಂದದೆ ಹೆಚ್ಚು ಸುಖಕ್ಕೆ ಆಶೆಪಡುವವನಿಗೆ, ಆ ಸೌದೆಸೀಳುವವನಿಗಾದಂತೆ, ಹೆಚ್ಚು ದುಃಖವೇ ಉಂಟಾಗುವುದು. ಆದುದರಿಂದ "ಪ್ರಾಣೇಶನೆ! ಮುಂದೆ ಹೆಚ್ಚು ಸುಖವನ್ನು ಹೊಂದಬೇಕೆಂಬ ದುರಾಶೆಯಿಂದ ಈಗ ದೊರ ಕಿರುವ ಸುಖವನ್ನೇಕೆ ತೊರೆದು ಬಿಡುವೆ?" ಎಂದಳು.

ಜಂಬೂಸ್ವಾಮಿಯು ವಿನಯಶ್ರೀಯ ಚತುರೋಕ್ತಿಗಳನ್ನು ಕೇಳಿ ಉತ್ತರವಾಗಿ ಈ ಮುಂದಿನ ಕಥೆಯನ್ನು ಹೇಳುತ್ತಾನೆ.

"ಒಂದು ಭಯಂಕರವಾದ ಅರಣ್ಯದಲ್ಲಿ ಒಬ್ಬ ಪ್ರಯಾಣಿಕನು ಪ್ರಯಾಣ ಮಾಡುತ್ತಿದ್ದನು. ಅವನನ್ನು ಒಂದು ಆನೆಯು ಕಂಡು ಹಿಂಬಾಲಿಸಿ ಓಡಿಸಿಕೊಂಡು ಹೋಯ್ತು. ಆಗ ಪ್ರಯಾಣಿಕನು ಓಡಿ ಒಂದು ಪಾಳುಬಾವಿಯ ದಡದಲ್ಲಿದ್ದ ಆಲದ ಮರದ ಬಿಳಲನ್ನು ಹಿಡಿದು ಬಾವಿಯ ನಡುವಿಗೆ ಜೋತಾಡಿದನು. ಬಾವಿಯ ಕೆಳಗೆ ಒಂದು ದೊಡ್ಡ ಹೆಬ್ಬಾವು ಬಾಯಿ ತೆರೆದಿತ್ತು. ನಾಲ್ಕು ಮೂಲೆಗಳಲ್ಲಿ ನಾಲ್ಕು ಸರ್ಪಗಳು ಹೆಡೆಗಳನ್ನೆತ್ತಿಕೊಂಡು ಬುಸುಗುಟ್ಟುತ್ತಿದ್ದುವು. ಆ ಪ್ರಯಾ ಣಿಕನು ಹಿಡಿದಿರುವ ಬಿಳಲನ್ನು ಒಂದು ಕಪ್ಪು ಇಲಿಯೂ ಒಂದು ಬಿಳಿ ಇಲಿಯೂ ಕತ್ತರಿಸುತ್ತಿದ್ದುವು. ಆನೆಯು ಸಿಟ್ಟಿನಿಂದ ಆ ಮರದ ಬುಡ

ವನ್ನು ಅಲುಗಾಡಿಸುತ್ತಿತ್ತು. ಆಗ ಆ ಮರದಲ್ಲಿ ಗೂಡುಗಟ್ಟಿದ್ದ ಜೇನುಸೊಣಗಳು ಎದ್ದು ಆ ಪ್ರಯಾಣಿಕನನ್ನು ಮುತ್ತಿಕೊಂಡು ಕಚ್ಚುತ್ತಿದ್ದುವು. ಬಾವಿಯ ಕೆಳಕ್ಕೆ ಬಿದ್ದರೆ ಹಾವುಗಳ ಬಾಧೆ. ದಡಕ್ಕೆ ಹೋದರೆ ಆನೆಯ ಬಾಧೆ. ಬಿಳಲನ್ನೇ ಹಿಡಿದಿರೋಣವೆಂದರೆ ಜೇನು ಸೊಣಗಳ ಬಾಧೆ. ಹಾಗೂ ಬಾಧೆಯನ್ನು ಸಹಿಸಿಕೊಂಡಿರೋಣವೆಂದರೆ ಆ ಬಿಳಲನ್ನು ಇಲಿಗಳು ಕತ್ತರಿಸುತ್ತಿದ್ದುವು. ಪ್ರಯಾಣಿಕನು ಆ ಕಷ್ಟ ದಶೆಯಲ್ಲಿರುವಾಗ ಮೇಲಿನ ಜೇನುಹೊಟ್ಟಿನಿಂದ ಗಳಿಗೆಗೊಂದು ಜೇನು ತುಪ್ಪದ ತೊಟ್ಟು ಅವನ ಬಾಯಿಗೆ ಬೀಳುತ್ತಿತ್ತು. ಅದನ್ನು ಸವಿಯು ತ್ತಿದ್ದನು. ಆಗ ಆ ಮಾರ್ಗವಾಗಿ ವಿಮಾನಾರೂಢನಾಗಿ ಹೋಗುತ್ತಿದ್ದ ವಿದ್ಯಾಧರನೊಬ್ಬನು ಈ ಪ್ರಯಾಣಿಕನ ಕಷ್ಟದಶೆಯನ್ನು ನೋಡಿ ಮರುಗಿ "ಅಯ್ಯಾ! ನಿನಗಿಷ್ಟವಿದ್ದರೆ ನಾನು ನಿನ್ನನ್ನು ಎತ್ತಿ ಈ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಹೋಗುವೆನು" ಎಂದನು. ಆಗ ಆ ಮೂರ್ಖ—ಪ್ರಯಾಣಿಕನು "ಅಯ್ಯಾ ಮಿತ್ರನೆ! ಇನ್ನೊಂದು ತೊಟ್ಟು ಜೇನುತುಪ್ಪವನ್ನು ಸವಿದುಬಿಟ್ಟು ಆ ಮೇಲೆ ಬರುವೆನು" ಎಂದು ಉತ್ತರವನ್ನಿತ್ತನು. "ಹಾಗೆಯೇ ಆಗಲಿ" ಎಂದು ವಿದ್ಯಾಧರನು ಕಾದಿದ್ದರೂ ಪ್ರಯಾಣಿಕನು "ಇನ್ನೊಂದು ತೊಟ್ಟು ಇನ್ನೊಂದು ತೊಟ್ಟು" ಎಂದು ಬಹು ಸಮಯವನ್ನು ಕಳೆದನು. ಕೊನೆಗೆ ವಿದ್ಯಾಧರನು ಬೇಸತ್ತು ಹೊರಟುಹೋದನು. ತರುವಾಯ ಸ್ವಲ್ಪಕಾಲದಲ್ಲೇ ಆ ಬಿಳಲನ್ನು ಇಲಿಗಳು ಸಂಪೂರ್ಣವಾಗಿ ಕತ್ತರಿಸಿಬಿಟ್ಟುವು. ಆಗ ಪ್ರಯಾಣಿಕನು ಬಾವಿಯೊಳಕ್ಕೆ ಬಿದ್ದು ಹೆಬ್ಬಾವಿನ ಬಾಯಿಗೆ ತುತ್ತಾದನು. ಹೀಗೆ ಸಂಸಾರಿಜೀವನೆಂಬ ಪ್ರಯಾಣಿಕನು ಭವವೆಂಬ ಘೋರ ಕಾನನದಲ್ಲಿ ಅಲೆಯುತ್ತಿರುವಾಗ ಮೃತ್ಯುವೆಂಬ ಆನೆಯು ಹಿಂಬಾಲಿಸಿ ಅಟ್ಟಿಕೊಂಡು ಬರುತ್ತಿರುವುದು. ಆಗ ಅವನು ಆಯುಷ್ಯವೆಂಬ ಬಿಳಲನ್ನು ಆಶ್ರಯಿಸಿರುತ್ತಾನೆ. ಆ ಬಿಳಲನ್ನು ಕೃಷ್ಣಪಕ್ಷ ಶುಕ್ಲಪಕ್ಷಗಳೆಂಬ

ಇಲಿಗಳು ಕತ್ತರಿಸುತ್ತಿರುತ್ತವೆ. ಕೆಳಗೆ ನಿಗೋದವೆಂಬುದೇ ಹೆಬ್ಬಾವು. ನರಕ ತಿರ್ಯಙ್ಮನುಷ್ಯ ದೇವಗತಿಗಳೆಂಬುವೇ ನಾಲ್ಕು ಸರ್ಪಗಳು. ಸಂಸಾರದಲ್ಲಿ ನಾನಾಪ್ರಕಾರವಾದ ರೋಗರುಜೆಗಳೆಂಬುವೇ ಜೇನು ನೊಣಗಳು. ಸಂಸಾರದಲ್ಲಿ ಉಂಟಾಗುವ ಶರೀರ ಮಾನಸ ಆಗಂತುಕ ದುಃಖಗಳ ಮಧ್ಯ ಮಧ್ಯದಲ್ಲಿ ದೊರೆಯುವ ಅಲ್ಪಸುಖವೆಂಬುದೇ ಜೇನು ತುಪ್ಪದ ತೊಟ್ಟು. ಸನ್ಮಾರ್ಗೋಪದೇಶಕನಾದ ಸದ್ಗುರುವೆಂಬವನೇ ವಿದ್ಯಾಧರ. ಆ ಪ್ರಯಾಣಿಕನು ಜೇನುತುಪ್ಪದ ತೊಟ್ಟಿನ ಆಶೆಯಿಂದ ವಿದ್ಯಾಧರನ ಹಿತವಚನವನ್ನು ಕೇಳದೆ ಬಾವಿಯೊಳಕ್ಕೆ ಬಿದ್ದು ಹೆಬ್ಬಾವಿಗೆ ತುತ್ತಾದಂತೆ ಸಂಸಾರಿಜೀವನು ಅಲ್ಪವಾದ ವಿಷಯಸುಖಲಂಪಟನಾಗಿ ಸದ್ಗುರುವಿನ ಹಿತೋಪದೇಶವನ್ನು ಕೇಳದೆ ನಿಗೋದಕ್ಕೆ ಬೀಳುವನು ಅಥವಾ ತನ್ನ ಕರ್ಮಾನುಸಾರವಾದ ಗತಿಯನ್ನು ಹೊಂದುವನು. ಆದುದರಿಂದ ಈ ಅಲ್ಪವಾದ ವಿಷಯಸುಖಕ್ಕೆ ಆಶೆಪಡುವುದು ವಿವೇಕತನವಲ್ಲವು."

ಜಂಬೂಸ್ವಾಮಿಯ ಈ ಮಾತುಗಳನ್ನು ಕೇಳಿ ವಿನಯಶ್ರೀಯೂ ನಿರುತ್ತರಳಾದಳು. ಆಗ ರೂಪಶ್ರೀಯೆಂಬ ಪತ್ನಿಯು ಪತಿಯನ್ನು ಕುರಿತು "ಸ್ವಾಮಿಯೆ! ನೀನು ನನ್ನ ಮೂರು ಮಂದಿ ಸವತಿಯರನ್ನೂ ವಂಚಿಸಿದೆ. ಈಗ ನನ್ನನ್ನು ವಂಚಿಸಿದರೆ ನೀನು ಚದುರನೇ ಸರಿ" ಎಂದು ಪೀಠಿಕೆಯನ್ನು ಹಾಕಿಕೊಂಡು "ಪ್ರಾಣೇಶ್ವರನೆ! ಕೇಳು, ಮಳೆಗಾಲದಲ್ಲಿ ಒಂದಾನೊಂದು ದಿವಸ ಹೆಚ್ಚಾಗಿ ಮಳೆ ಬಂದು ಬಿಲ ಮೊದಲಾದುವುಗಳಲ್ಲಿ ನೀರು ತುಂಬಿಕೊಂಡಿತು. ಅದರಿಂದ ದುಃಖಿತವಾದ ಒಂದು ಪ್ರಾಣಿಯು ಒಂದು ಬಿಲದಿಂದ ಹೊರಟು ಓಡಿತು. ಅದನ್ನು ನೋಡಿ ಮತ್ತೊಂದು ಬಿಲದಿಂದ ಒಂದು ಸರ್ಪವು ಹಿಂಬಾಲಿಸಿ ಓಡಿತು. ಆಗ ಆ ಪ್ರಾಣಿಯು ಓಡಿ ಹೋಗಿ ಪುನಃ ಆ ಬಿಲವನ್ನು ಹೊಕ್ಕಿತು. ಅದನ್ನು ಹಿಂಬಾಲಿಸಿ ಸರ್ಪವೂ ಹೊಕ್ಕಿ ಆ ಪ್ರಾಣಿಯನ್ನು ತಿಂದಿತು. ಬಳಿಕ ಆ ಸರ್ಪವು

ಅಷ್ಟರಿಂದಲೇ ತೃಪ್ತಿಯನ್ನು ಹೊಂದದೆ ಮತ್ತೆ ಪ್ರಾಣಿಗಳು ಸಿಕ್ಕಬಹು ದೆಂಬ ದುರಾಶೆಯಿಂದ ಬಿಲದಿಂದ ಹೊರಕ್ಕೆ ಬಂದು ಈ ಕಡೆ ಆ ಕಡೆ ಓಡಾಡುತ್ತ ಪ್ರಾಣಿಗಳನ್ನು ಹುಡುಕುತ್ತಿತ್ತು. ಅಷ್ಟರಲ್ಲಿ ಅಕಸ್ಮಾತ್ ಒಂದು ಮುಂಗಲಿಯು ಬಂದು ಆ ಸರ್ಪವನ್ನು ಕಚ್ಚಿ ತುಂಡು ತುಂಡು ಮಾಡಿತು. ಸರ್ಪದ ದುರಾಶೆಯು ಪ್ರಾಣಹಾನಿಯಲ್ಲಿ ಕೊನೆಗಂಡಿತು. ತನ್ನ ಅದೃಷ್ಟದಿಂದ ಎಷ್ಟು ಸುಖವು ದೊರಕುವುದೋ ಅಷ್ಟರಲ್ಲಿ ತೃಪ್ತಿ ಯನ್ನು ಹೊಂದದೆ ಇನ್ನೂ ಹೆಚ್ಚು ಸುಖವು ಬೇಕೆಂದು ದುರಾಶೆಪಡು ವವರ ಪಾಡೆಲ್ಲ ಆ ಹಾವಿನ ಪಾಡಿನಂತೆಯೇ ಸರಿ. ಆದುದರಿಂದ ಪ್ರಿಯನೆ! ಮುಂದಿನ ಭವದಲ್ಲಿ ಅಧಿಕಸುಖವನ್ನು ಹೊಂದಬೇಕೆಂಬ ದುರಾಶೆಯಿಂದ ಈಗ ಅನಾಯಾಸವಾಗಿ ದೊರಕಿರುವ ಸುಖವನ್ನು ಕಳೆದುಕೊಳ್ಳಬೇಡ" ಎಂದಳು.

ರೂಪಶ್ರೀಯು ಮಾತನ್ನು ಕೇಳಿ ಜಂಬೂಕುಮಾರನು ಮುಗು ಳ್ನಗೆ ನಕ್ಕು ಆಕೆಯನ್ನು ಕುರಿತು "ಎಲೌ ರೂಪಶ್ರೀಯೆ! ಕೇಳು, ಒಂದು ವನದಲ್ಲಿ ಬಹಳವಾಗಿ ಹಸಿದಿದ್ದ ಒಂದು ಹದ್ದು ಹಾರಾಡು ತ್ತಿತ್ತು. ಒಂದು ದಿವಸ ಆ ವನದ ಸಮೀಪದಲ್ಲಿರುವ ನಗರದ ಹೊರ ಗಡೆಯಲ್ಲಿ ಒಂದು ಎತ್ತು ಸತ್ತು ಬಿದ್ದಿರುವುದನ್ನು ನೋಡಿ ಆ ಹದ್ದು ಅದನ್ನು ತಿನ್ನುವುದಕ್ಕೆ ತೊಡಗಿತು. ರಾತ್ರಿಯಲ್ಲೆಲ್ಲ ತಿಂದು ತಿಂದು ತೃಪ್ತಿಯನ್ನು ಹೊಂದದೆ ಬೆಳಗಾದ ಮೇಲೆಯೂ ಅದರಲ್ಲೇ ಪರ ವಶವಾಗಿ ತಿನ್ನುತ್ತಿತ್ತು. ಆಗ ನಗರನಿವಾಸಿಗಳು ಕೆಲವರು ನೋಡಿ ಅದನ್ನು ಹಿಡಿದು ಅದರ ರೆಕ್ಕೆ ಪುಕ್ಕಗಳನ್ನೆಲ್ಲ ಕಿತ್ತುಬಿಟ್ಟರು. ಆಗ ಅದು ಹಾರಾಡಲಾರದೆ ನೆಲದ ಮೇಲೆ ಓಡಿತು. ಅದನ್ನು ಹಿಂಬಾಲಿಸಿ ನಾಯಿ ಗಳು ಓಡಿ ಹೋಗಿ ಕಡಿದು ಕೊಂದುಹಾಕಿದುವು. ಆ ಹದ್ದು ತನಗೆ ಬೇಕಾದಷ್ಟು--ಮಿತವಾಗಿ ತಿಂದು ಹಾರಿ ಹೋಗಿದ್ದರೆ ಪ್ರಾಣಾಪಾಯವು ಸಂಭವಿಸುತ್ತಿರಲಿಲ್ಲ. ಅದರಂತೆ ಅವಿವೇಕಿಯಾದ ಮನುಷ್ಯನು ಸಂಸಾರ

ಸುಖದಲ್ಲಿ ಅತ್ಯಾಸಕ್ತನಾಗಿ ಭವಮಾಲೆಯಲ್ಲಿ ಕರ್ಮಪರವಶನಾಗಿ ದುಃಖವನ್ನನುಭವಿಸುತ್ತಾನೆ. ಆದುದರಿಂದ ವಿವೇಕಿಗಳು ವಿಷಯಸುಖದಲ್ಲಿ ಲಂಪಟರಾಗದೆ ಇದನ್ನು ತೊರೆದು ಬಿಡುವುದೇ ಅವರಿಗೆ ಆತ್ಮಹಿತಕರವಾಗಿರುವುದು ” ಎಂದನು.

ಈ ರೀತಿಯಾಗಿ ಪತಿ ಪತ್ನಿಯರ ಉತ್ತರ ಪ್ರತ್ಯುತ್ತರಗಳಿಂದ ರಾತ್ರಿ ಬೆಳಗಾಯಿತು. ಜಂಬೂಸ್ವಾಮಿಯ ಆ ನಾಲ್ಕು ಮಂದಿ ಪತ್ನಿಯರೂ ಪತಿಯ ಹಿತೋಕ್ತಿಗಳನ್ನು ಕೇಳಿ ಬೆರಗಾದರು. ಅವರ ಹೃದಯ ಮಂದಿರಗಳಲ್ಲಿಯೂ ವಿಷಯವಿರಕ್ತಿಯೆಂಬ ಜ್ಯೋತಿಯು ಸಂಚಾರಕ್ಕೆ ಮೊದಲಾಯಿತು. ಎಲ್ಲರೂ ಪ್ರಾತಃಕ್ರಿಯೆಗಳನ್ನು ತೀರಿಸುವುದಕ್ಕಾಗಿ ಶಯ್ಯಾಗೃಹದಿಂದ ಹೊರಟು ಹೋದರು. ಜಂಬೂಸ್ವಾಮಿಯ ತಾಯಿ—ಜಿನಮತಿಗೆ ಚಿಂತೆಯಿಂದ ಆ ರಾತ್ರಿಯೆಲ್ಲ ನಿದ್ರೆಯೇ ಬರಲಿಲ್ಲ. ಆಕೆಯು ಬೆಳಗಿನ ಜಾವದಲ್ಲಿ ತನ್ನ ಕೆನ್ನೆಯ ಮೇಲೆ ಕೈಯನ್ನಿಟ್ಟು ಚಿಂತಾತುರಳಾಗಿ ಮನೆಯ ಬಾಗಿಲಲ್ಲಿ ಕುಳಿತಿದ್ದಳು. ಅಲ್ಲಿ ಒಬ್ಬ ಮನುಷ್ಯನು ನಿಂತಿರುವುದು ಆಕೆಯ ದೃಷ್ಟಿಗೆ ಬಿತ್ತು. ಆಗ ಆಕೆಯು ಆತನನ್ನು ಕುರಿತು “ ಅಯ್ಯಾ ! ನೀನು ಯಾರು ? ಇಲ್ಲಿಗೇಕೆ ಬಂದಿರುವೆ ? ” ಎಂದು ಕೇಳಿದಳು. ಅದಕ್ಕೆ ಆ ಮನುಷ್ಯನು “ ಅಮ್ಮಾ ! ನಾನೊಬ್ಬ ಕಳ್ಳನು. ಮೊದಲು ಅನೇಕವೇಳೆಗಳಲ್ಲಿ ನಿಮ್ಮ ಮನೆಯಿಂದ ಕದ್ದುಕೊಂಡು ಹೋಗಿದ್ದೇನೆ. ವಿದ್ಯುಚ್ಚರನೆಂದು ನನ್ನ ಹೆಸರು. ನಾನೊಬ್ಬ ರಾಜಪುತ್ರ. ಬಾಲ್ಯದಲ್ಲೇ ನನಗೆ ಈ ಚೌರ್ಯವ್ಯಸನವು ಅಂಟಿಕೊಂಡು ನಾನು ದೇಶಭ್ರಷ್ಟನಾಗುವಂತೆ ಮಾಡಿತು. ನೀನು ಮಹಾಧರ್ಮಿಷ್ಠಳಾಗಿ ತೋರುವುದರಿಂದ ನಿನ್ನಲ್ಲಿ ನಿಜಸ್ಥಿತಿಯನ್ನು ಹೇಳಿದರೆ ನನಗೆ ಕೆಡಕಾಗದೆಂದು ಭಾವಿಸಿ ಹೇಳಿದೆನು ತಾಯಿ ” ಎಂದನು.

ಜಿನಮತಿಯು ವಿದ್ಯುಚ್ಚರನ ಮಾತನ್ನು ಕೇಳಿ ಅವನನ್ನು ಕರೆದುಕೊಂಡು ಹೋಗಿ ತನ್ನ ಸಂಪತ್ತಿಯನ್ನು ಅವನಿಗೆ ತೋರಿಸಿ “ ಅಯ್ಯಾ!

ಇದೇ ನಮ್ಮ ಧನ ಕನಕ ರತ್ನರಾಶಿ ಮೊದಲಾದ ಸಂಪತ್ತಿ. ಇದರಿಂದ ನಿನಗೆ ಬೇಕಾದಷ್ಟು ತೆಗೆದುಕೊಂಡು ಹೋಗು" ಎಂದಳು. ಆ ಮಾತನ್ನು ಕೇಳಿ ವಿದ್ಯುಚ್ಚರನು ಆಶ್ಚರ್ಯಚಕಿತನಾಗಿ ಜಿನಮತಿಯನ್ನು ಕುರಿತು "ಎಲೈ ಮಾತೆಯೆ! ನೀನು ಗಳಿಗೆಗೊಂದು ಸಲ ಮನೆಯೊಳಕ್ಕೆ ಹೋಗುತ್ತಲೂ ಹೊರಕ್ಕೆ ಬರುತ್ತಲೂ ಇರುವುದಕ್ಕೂ ಹೀಗೆ ನಿಸ್ಪೃಹಳಾಗಿ ತನ್ನ ಸಂಪತ್ತಿಯನ್ನು ತೆಗೆದುಕೊಳ್ಳಲು ಹೇಳುವುದಕ್ಕೂ ಕಾರಣವೇನು?" ಎಂದು ಪ್ರಶ್ನೆ ಮಾಡಿದನು.

ವಿದ್ಯುಚ್ಚರನ ಆ ಮಾತನ್ನು ಕೇಳಿ ಜಿನಮತಿಯು "ಅಯ್ಯಾ! ಈ ಪ್ರಾತಃಕಾಲದಲ್ಲಿ ನನ್ನ ಮಗನು ದೀಕ್ಷೆಯನ್ನು ತೆಗೆದುಕೊಳ್ಳುವನು. ಈತನ ಈ ನಾಲ್ಕು ಮಂದಿ ಪತ್ನಿಯರು ನಿನ್ನೆ ತಾನೆ ವಿವಾಹಿತರಾದವರು. ನನಗಿರುವ ಒಬ್ಬ ಮಗನೂ ದೀಕ್ಷೆಯನ್ನು ತೆಗೆದುಕೊಂಡ ಮೇಲೆ ಈ ಸಂಪತ್ತಿಯನ್ನು ಅನುಭವಿಸುವವರಾರು? ನೀನು ಸಕಾಲದಲ್ಲಿ ಬಂದೆ. ಇದನ್ನು ನೀನು ತೆಗೆದುಕೊಂಡು ಹೋಗಿ ಅನುಭವಿಸು. ನನಗಿದು ಭಾರವಾಗಿ ತೋರುತ್ತದೆ. ಈ ಚಿಂತೆಯಿಂದಲೇ ನಾನು ಒಳಗೂ ಹೊರಗೂ ಹೋಗುತ್ತಿರುವುದಾಗಿದೆ. ಎಲ್ಲಿಯೂ ಮನಸ್ಸಮಾಧಾನವಾಗುವುದಿಲ್ಲ. ಎಲ್ಲವೂ ನನಗೆ ಅಂಧಕಾರಮಯವಾಗಿ ತೋರುತ್ತಿದೆ" ಎಂದು ಉತ್ತರವನ್ನಿತ್ತಳು.

ವಿದ್ಯುಚ್ಚರನಿಗೆ ಜಿನಮತಿಯ ಮಾತು ವಿಚಿತ್ರವಾಗಿ ತೋರಿತು. ಆಗ ಅವನು ಜಿನಮತಿಯನ್ನು ಕುರಿತು "ಮಾತೆಯೆ! ಈಗ ನನಗೆ ಸಂಪತ್ತಿಯ ಇಚ್ಛೆಯಿಲ್ಲ. ನೀನು ನನಗೆ ನಿನ್ನ ಮಗನನ್ನು ತೋರಿಸು. ನಾನು ಅವನಿಗೆ ಸಮಾಧಾನವನ್ನು ಹೇಳಿ ದೀಕ್ಷೆಗೆ ಹೋಗದಂತೆ ಮಾಡುವೆನು. ನನ್ನ ಮಾತನ್ನು ಅವನು ಕೇಳದಿದ್ದರೆ ನನಗೂ ಅವನ ದಾರಿಯೆ" ಎಂದನು.

ವಿದ್ಯುಚ್ಚರನ ಮಾತಿನಿಂದ ಜಿನಮತಿಗೆ ಸ್ವಲ್ಪ ಸಂತೋಷವಾಯಿತು. ಆಗ ಅವಳು "ಮಗನೆ! ನೀನು ಇಷ್ಟೊಂದು ಉಪಕಾರ ಮಾಡಿದರೆ ನಾನು ನಿನಗೆ ಬಹಳ ಕೃತಜ್ಞಳಾಗಿರುವೆನು. ಈಗ ನೀನು ತ್ವರೆ ಮಾಡು—ಬಾ" ಎಂದು ಹೇಳಿ ಆತನನ್ನು ಜಂಬೂಸ್ವಾಮಿಯ ಬಳಿಗೆ ಕರೆದುಕೊಂಡು ಹೋಗಿ "ಕಂದ! ನಿನ್ನ ಸೋದರಮಾವನು ಹನ್ನೆರಡು ವರುಷಗಳ ಹಿಂದೆ ವಿದೇಶಕ್ಕೆ ಹೋಗಿದ್ದು ಈಗ ನಿನ್ನ ಮದುವೆಯ ವಾರ್ತೆಯನ್ನು ಕೇಳಿ ಇದೋ ಬಂದಿದ್ದಾನೆ" ಎಂದು ಹೇಳಿದಳು. ಜಂಬೂಸ್ವಾಮಿಗೆ ವಿದ್ಯುಚ್ಚರನ ಮಾತಿನಲ್ಲಿ ಗೌರವವುಂಟಾಗಲೆಂಬ ಉದ್ದೇಶದಿಂದ ಜಿನಮತಿಯು ಮಗನಿಗೆ ವಿದ್ಯುಚ್ಚರನು ಸೋದರಮಾವನೆಂದು ಹೇಳಿದಳಲ್ಲದೆ ನಿಜವಾಗಿ ಸೋದರಮಾವನಲ್ಲವೆಂದು ವಾಚಕರು ಊಹಿಸಿರಬಹುದು.

ವಿದ್ಯುಚ್ಚರನಿಗೂ ಜಂಬೂಸ್ವಾಮಿಗೂ ಪರಸ್ಪರ ಸಂದರ್ಶನವಾಗಿ ಅವರು ಕುಶಲಪ್ರಶ್ನೆಯನ್ನು ಮಾಡಿಕೊಂಡನಂತರ ವಿದ್ಯುಚ್ಚರನು ತನ್ನ ಉದ್ದೇಶವನ್ನು ಈಡೇರಿಸುವುದಕ್ಕಾಗಿ ಯಾವ ಯಾವುದೋ ಹಲವು ಮಾತುಗಳನ್ನಾಡಿದನು—ಒಂದು ಸಲ ದೇಶ ದೇಶಾಂತರವಿಷಯಗಳನ್ನೂ ಮತ್ತೊಂದು ಸಲ ದ್ರವ್ಯಾರ್ಜನೆಯ ವಿಷಯವನ್ನೂ ಮಗದೊಂದು ಸಲ ಸ್ತ್ರೀವಿಷಯವನ್ನೂ ಹೀಗೆ ನಾನಾವಿಷಯಗಳನ್ನು ಪ್ರಸ್ತಾವಿಸುತ್ತ ಮಧ್ಯ ಮಧ್ಯದಲ್ಲಿ ವಿಷಯಾಸಕ್ತಿಯನ್ನುಂಟುಮಾಡತಕ್ಕ ಚತುರೋಕ್ತಿಗಳನ್ನೂ ನುಡಿದನು. ಆದರೆ ಅವನ ಚತುರೋಕ್ತಿಗಳೆಂಬ ಜಲಬಿಂದುಗಳು ಜಂಬೂಕುಮಾರನ ದೃಢಸಂಕಲ್ಪವೆಂಬ ಬಂಡೆಯನ್ನು ಮೃದುಮಾಡಲಾರದೆ ಹೋದುವು. ಆಗ ವಿದ್ಯುಚ್ಚರನು ಜಂಬೂಕುಮಾರನನ್ನು ಕುರಿತು "ಅಯ್ಯಾ! ಕುಮಾರನೆ!! ಲೋಕದಲ್ಲಿ ಎಷ್ಟೋ ಜನರಿದ್ದಾರೆ. ಆದರೆ ಅವರಿಗೆಲ್ಲ ಯಾರು ಹೇಳುವುದಕ್ಕೆ ಹೋಗುತ್ತಾರೆ? ನೀನು ನಮ್ಮ ಮನೆಯ ಹುಡುಗನೆಂಬ ಮಮಕಾರದಿಂದ ನಿನಗೆ ನಾನು ಹೇಳುವುದಾಗಿದೆ. ಹಿರಿಯರ ಮಾತುಗಳನ್ನು ಕೇಳಿ ಅದರಂತೆ ನಡೆಯುವುದು ಉತ್ತಮ

ಬಾಲಕರ ಕರ್ತವ್ಯವಾಗಿದೆ. ನೋಡು—ದುರಾಶೆಗೆ ಬಲಿಬೀಳುವವರು ಅವಶ್ಯವಾಗಿ ದುಃಖಭಾಗಿಗಳಾಗುವರೆನ್ನುವುದಕ್ಕೆ ಉದಾಹರಣೆಯನ್ನು ಹೇಳುತ್ತೇನೆ, ಕೇಳು:—

ಒಂದು ಅರಣ್ಯದಲ್ಲಿ ಒಂದು ಒಂಟೆಯು ಗಿಡಬಳ್ಳಿಗಳ ಸೊಪ್ಪುಗಳನ್ನು ಮೇಯುತ್ತ ಒಂದು ಬಾವಿಯ ಸಮೀಪಕ್ಕೆ ಹೋಗಿ ಅದರ ದಡದಲ್ಲಿರುವ ಒಂದು ಗಿಡದ ಸೊಪ್ಪುಗಳನ್ನು ಎಟಕಿಸಿಕೊಂಡು ತಿನ್ನುತ್ತಿತ್ತು. ಆಗ ಆ ಗಿಡದಲ್ಲಿ ಗೂಡುಗಟ್ಟಿದ್ದ ಜೇನುಗಳ ಹೊಟ್ಟೆಯಿಂದ ಒಂದು ತೊಟ್ಟು ಜೇನುತುಪ್ಪವು ಆ ಒಂಟೆಯ ಬಾಯಿಯೊಳಗೆ ಬಿದ್ದಿತು. ಅದನ್ನು ಆಸ್ವಾದಿಸಿ ಬಾಯಿ ಚಪ್ಪರಿಸಿ ಮತ್ತೆ ತೊಟ್ಟಿಕ್ಕುವುದೆಂದು ಕುತ್ತಿಗೆಯನ್ನೆತ್ತಿ ಬಾಯಿ ತೆರೆದು ನಿಂತಿತು. ಬಹುಸಮಯವಾದರೂ ಮಧುವಿನ ತೊಟ್ಟು ಬೀಳಲಿಲ್ಲ. ಆಗ ಆ ಒಂಟೆಯು ಮುಂದಿನ ಎರಡು ಕಾಲುಗಳನ್ನು ಎತ್ತಿ ಎತ್ತರದಲ್ಲಿದ್ದ ಆ ಜೇನುಹೊಟ್ಟನ್ನು ಎಟಕಿಸಿಕೊಳ್ಳಲು ಪ್ರಯತ್ನಿಸಿ ಕಾಲುಜಾರಿ ಬಾವಿಯೊಳಕ್ಕೆ ಬಿದ್ದು ಅಲ್ಲೇ ಒದ್ದಾಡಿ ಸತ್ತುಹೋಯಿತು. ಅದರಂತೆ ಉತ್ತರಭವದಲ್ಲಿ ಹೆಚ್ಚು ಸುಖವನ್ನು ಪಡೆಯಬೇಕೆಂಬ ದುರಾಶೆಯಿಂದ ಐಹಿಕಭೋಗಸುಖವನ್ನು ಬಿಟ್ಟರೆ ಹೆಚ್ಚು ದುಃಖವೇ ಉಂಟಾಗುವುದು. ಮುಂದಿನ ವಿಷಯವನ್ನು ಕಂಡವರಾರು ? ಎಲೈ ಬಾಲಕನೆ! ನಿನ್ನ ಪೂರ್ವಪುಣ್ಯದಿಂದ ನಿನಗೆ ದೊರಕಿರುವ ಈ ಭೋಗಸುಖಸಂಪತ್ತಿಯನ್ನು ಕೈಬಿಟ್ಟರೆ ಪುನಃ ಎಷ್ಟು ಪ್ರಯತ್ನವನ್ನು ಮಾಡಿದರೆ ತಾನೆ ಇದು ನಿನಗೆ ದೊರೆಯುವುದೇ ? ಆದುದರಿಂದ ಹುಡುಗಾಟವನ್ನು ಬಿಟ್ಟು ಯಥೇಚ್ಛವಾಗಿ ವಿಷಯಸುಖವನ್ನು ಭೋಗಿಸು ”

ವಿದ್ಯುಚ್ಚರನು ಹೇಳಿದ ಕಥೆಯನ್ನು ಕೇಳಿ ಜಂಬೂಕುಮಾರನು “ ಮಾವಾಜೀ ! ನಾನೂ ಒಂದು ಕಥೆಯನ್ನು ಹೇಳುತ್ತೇನೆ. ಕೇಳು, ಒಬ್ಬ ವೈಶ್ಯನು ವ್ಯಾಪಾರನಿಮಿತ್ತವಾಗಿ ಪರದೇಶಕ್ಕೆ ಹೊರಟು ಹೋಗುತ್ತಿದ್ದನು. ದಾರಿಯಲ್ಲಿ ಅವನಿಗೆ ಬಹಳ ಬಾಯಾರಿಕೆಯಾಯಿತು. ಆಗ

ಒಂದು ಮರದ ಬುಡದಲ್ಲಿ ಕುಳಿತನು. ಅಲ್ಲಿಗೆ ಕೆಲವರು ಕಳ್ಳರು ಬಂದು ಅವನನ್ನು ಮುತ್ತಿ ಅವನಲ್ಲಿದ್ದ ದ್ರವ್ಯವನ್ನೆಲ್ಲ ಅಪಹರಿಸಿದರು. ಅವನಿಗೆ ಬಾಯಾರಿಕೆಯ ದುಃಖವೊಂದು ಕಡೆ, ದ್ರವ್ಯವೆಲ್ಲ ಕಳೆದು ಹೋದುದರಿಂದುಂಟಾದ ದುಃಖವು ಮತ್ತೊಂದು ಕಡೆ. ಈ ಉಭಯದುಃಖಗಳಿಂದ ಬೆಂಡಾದ ಆ ವೈಶ್ಯನು ಅಲ್ಲೇ ಮಲಗಿ ನಿದ್ರಿಸಿದನು. ಕನಸಿನಲ್ಲಿ ನಿರ್ಮಲ ಜಲಭರಿತವಾದ ಒಂದು ಸಮುದ್ರವನ್ನು ಕಂಡು ನೀರನ್ನು ಕುಡಿಯುವುದಕ್ಕಾಗಿ ನಾಲಗೆಯನ್ನು ನೀಡಿದನು. ಅಷ್ಟರಲ್ಲಿ ನಿದ್ರೆಯು ಬಿಟ್ಟುಹೋಯಿತು. ಕಣ್ಣುಗಳನ್ನು ತೆರೆದು ನೋಡಿ ದುಃಖಿತನಾದನು. ಈ ಸಂಸಾರ ಸುಖವೂ, ಆ ವೈಶ್ಯನು ಕನಸಿನಲ್ಲಿ ಕಂಡ ನೀರಿನಂತೆ, ನಶ್ವರವಾದುದು. ಇದಕ್ಕೆ ಆಶೆ ಪಡುವವನು ಅವಿವೇಕಿ" ಎಂದು ಮೊದಲಾಗಿ ಅನೇಕ ದೃಷ್ಟಾಂತಗಳನ್ನು ಕೊಟ್ಟು ವಿದ್ಯುಚ್ಚರನನ್ನು ನಿರುತ್ತರನನ್ನಾಗಿ ಮಾಡಿದನು. ಆಗ ವಿದ್ಯುಚ್ಚರನು ತನ್ನ ಚಾತುರ್ಯವೇನೂ ನಡೆಯುವುದಿಲ್ಲವೆಂದು ತಿಳಿದು ಜಂಬೂಕುಮಾರನನ್ನು ಕುರಿತು "ಅಯ್ಯಾ! ನಮ್ಮಗಳನ್ನೇಕೆ ದುಃಖಪಡಿಸುತ್ತಿರುವೆ? ಶಾಂತಚಿತ್ತನಾಗಿ ಮನೆಯಲ್ಲಿರು." ಎಂದು ಹೇಳಿ ತನ್ನ ರುಮಾಲನ್ನು ತೆಗೆದು ಜಂಬೂಸ್ವಾಮಿಯ ಮುಂದಿಟ್ಟು ನಮ್ರನಾಗಿ "ನೀನು ಹೋದರೆ ನಿನಗೆ ನಿನ್ನ ತಾಯಿಯ ಆಣೆಯಿದೆ. ನನ್ನ ಮಾತು ಹಾಗಿರಲಿ. ತಂದೆ ತಾಯಿಗಳು ಮೊದಲಾದ ಹಿರಿಯರ ಮಾತಿನಂತೆ ನಡೆಯುವುದು ಉತ್ತಮಬಾಲಕರ ಕರ್ತವ್ಯವಾಗಿದೆ" ಎಂಬೀ ಮೊದಲಾದ ಹಲವು ಮಾತುಗಳಿಂದ ಜಂಬೂಕುಮಾರನನ್ನು ವಶಪಡಿಸಬೇಕೆಂದು ಪ್ರಯತ್ನಿಸಿದನಾದರೂ ಸಫಲವಾಗದೆ ಆ ಮಾತುಗಳಿಂದ ಜಂಬೂಸ್ವಾಮಿಯ ವೈರಾಗ್ಯಭಾವವು ವೃದ್ಧಿಯಾಗುತ್ತಲೇ ಹೋಯಿತು.

ಜಂಬೂಸ್ವಾಮಿಯು ದೀಕ್ಷೆಗೆ ಹೊರಡುವ ಸಮಯವು ಸಮೀಪಿಸುತ್ತ ಬಂದಾಗ ತನ್ನ ಬಂಧುಗಳನ್ನು ಕುರಿತು "ಬಾಂಧವರೆ! ಕಲ್ಲಿನಲ್ಲಿ ತಾವರೆಯನ್ನೂ ನೀರಿನಲ್ಲಿ ಬೆಣ್ಣೆಯನ್ನೂ ಮರಳಿನಿಂದ ಎಣ್ಣೆಯನ್ನೂ

ಹೊಂದುವುದಕ್ಕೆ ಪ್ರಯತ್ನಪಡುವುದು ಹೇಗೆ ವ್ಯರ್ಥವೋ ಹಾಗೆಯೇ ವಿರಾಗಭಾವದಿಂದ ಕೂಡಿದ ಮನುಷ್ಯನನ್ನು ಸರಾಗಭಾವವುಳ್ಳವನನ್ನಾಗಿ ಮಾಡಬೇಕೆನ್ನುವ ಪ್ರಯತ್ನವೂ ವ್ಯರ್ಥ. ಸಮಸ್ತ ಭೋಗವಸ್ತುಗಳೂ ನನಗೆ ತೃಣಸಮಾನವಾಗಿ ತೋರುತ್ತಿವೆ. ವಿಷಯಸುಖವು ಕಾಳಿಂಗಸರ್ಪದಂತೆ ಭಯಂಕರವಾಗಿ ತೋರುತ್ತಿದೆ. ನಿಮ್ಮ ಪ್ರೀತಿವಚನಗಳೆಲ್ಲ ನನಗೆ ವಿಷಲಿಪ್ತವಾದ ಬಾಣಗಳಂತೆ ತಗಲುತ್ತಿವೆ. ಮನೆಯು ಸೆರೆಮನೆಯಂತೆ ತೋರುತ್ತಿದೆ. ಪತ್ನಿಯರು ಒರಟಾದ ಬೇಡಿಗಳಂತೆ ತೋರುತ್ತಾರೆ. ಸಂಸಾರವು ಭಯಂಕರವಾದ ಅರಣ್ಯದಂತೆ ತೋರುತ್ತಿದೆ. ಇದರಲ್ಲಿ ಪರಪೀಡೆಯನ್ನು ಮಾಡುವ ಸ್ವಾರ್ಥಜೀವಿಗಳು ಸಿಂಹ ವ್ಯಾಘ್ರಾದಿಗಳಿಗೆ ಸಮಾನರಾಗಿರುತ್ತಾರೆ. ಇಂತಹ ಭಯಂಕರವಾದ ಸಂಸಾರದ ಸ್ವರೂಪವನ್ನು ತಿಳಿದೂ ಇದರಲ್ಲಿರುವುದು ಬುದ್ಧಿಮಂತರಿಗೆ ಉಚಿತವಲ್ಲ. ಸಮಯವು ದೊರಕಿದಾಗಲೂ ಅದನ್ನು ವ್ಯರ್ಥವಾಗಿ ಕಳೆಯುವುದು ವಿವೇಕತನವಲ್ಲ. ತಮ್ಮ ಮಕ್ಕಳು, ಬಾಲಕರು ಉಚ್ಚಸ್ಥಾನಕ್ಕೇರುವುದನ್ನು ನೋಡಿ ಸಂತೋಷಪಡುವ ತಂದೆತಾಯಿಗಳೂ ಗುರುಗಳೂ ಹಿರಿಯರೂ ಹಿತಕಾರಿಗಳಲ್ಲದೆ ಅಸೂಯೆಪಡುವವರು ಸಂಸಾರಬಂಧನದಲ್ಲಿ ಸಿಕ್ಕಿಸಿ ದುರ್ಗತಿಗೆ ತಳ್ಳುವವರು ಹಿತಕಾರಿಗಳಾದ ತಂದೆತಾಯಿಗಳಲ್ಲ, ಗುರುಗಳಲ್ಲ. ಹಿರಿಯರಲ್ಲ. ಅಂತಹವರು ಶತ್ರುಗಳೆಂದು ಹೇಳಬೇಕು. ಆದುದರಿಂದ ಹಿರಿಯರೆ! ಬಾಂಧವರೆ!! ಇನ್ನೂ ನನ್ನನ್ನು ಬಲಾತ್ಕರಿಸುವುದು ತಮ್ಮಗಳ ಕರ್ತವ್ಯವಲ್ಲ. ನನ್ನ ಅಮೂಲ್ಯಸಮಯವನ್ನು ವ್ಯರ್ಥವಾಗಿ ಕಳೆಯದಿರಿ" ಎಂದನು. ಈ ಮಾತುಗಳನ್ನು ಕೇಳಿ ಎಲ್ಲರ ಹೃದಯವೂ ಕಂಪಿತವಾಯ್ತು. ಯಾರೂ ಪ್ರತಿಯಾಗಿ ಉಸಿರೆತ್ತಲಿಲ್ಲ.

ಬಳಿಕ ವಿದ್ಯುಚ್ಚರನು ತನ್ನ ಪ್ರಯತ್ನವು ನಿಷ್ಫಲವಾದುದನ್ನು ಕಂಡು ಸ್ವಾಮಿಯನ್ನು ಕುರಿತು "ಪುಣ್ಯಾತ್ಮನೆ! ನಾನು ನಿನ್ನಲ್ಲಿ ಸುಳ್ಳು ಹೇಳಿದೆನು, ಕ್ಷಮಿಸಬೇಕು. ನಾನು ಹಸ್ತಿನಾಪುರದ ದೊರೆಯಾದ

ದುರದಂಡನ ಮಗನು. ನಾನು ಬಾಲ್ಯಾವಸ್ಥೆಯಲ್ಲೇ ಚೌರ್ಯವ್ಯಸನಾ ಸಕ್ತನಾದುದರಿಂದ ತಂದೆಯು ನನ್ನನ್ನು ಗಡಿಪಾರು ಮಾಡಿದನು. ನಾನು ಅನೇಕ ದೇಶಗಳಲ್ಲಿ ತಿರುತಿರುಗಿ ಕದ್ದು ವೇಶ್ಯೆಗೆ ಕೊಡುತ್ತಿದ್ದೆನು. ಈ ದಿವಸವೂ ಕದಿಯುವುದಕ್ಕೋಸ್ಕರ ಇಲ್ಲಿಗೆ ಬಂದಿದ್ದೆನು. ನನ್ನ ಭಾಗದ ಸುದೈವದಿಂದ ಇಲ್ಲಿ ನಿನ್ನ ಸಂದರ್ಶನವೂ ದಿವ್ಯೋಪದೇಶವೂ ದೊರೆತುವು. ಈಗ ನಾನು ಸಂಪೂರ್ಣವಾಗಿ ವಿರಕ್ತನಾಗಿದ್ದೇನೆ. ನಿನ್ನಂತಹ ಮಹಾಪುರುಷರ ಮಾರ್ಗವು ಅನುಕರಣೀಯವಾದುದು. ಆದುದರಿಂದ ಸ್ವಾಮಿಯೆ! ದೀನನಾದ ನನ್ನನ್ನು ನಿನ್ನ ಪಾದಸೇವಕನನ್ನಾಗಿ ಪರಿಗ್ರಹಿಸಿ ನಿನ್ನೊಡನೆ ದೀಕ್ಷೆಗೆ ಕರೆದುಕೊಂಡು ಹೋಗಬೇಕೆಂದು ಇದೋ ಕೈಜೋಡಿಸಿ ಪ್ರಾರ್ಥಿಸುತ್ತೇನೆ" ಎಂದನು.

ಜಂಬೂಸ್ವಾಮಿಯು ವಿದ್ಯುಚ್ಚರನ ಪ್ರಾರ್ಥನೆಯನ್ನು ಅಂಗೀಕರಿಸಿ ಕೂಡಲೆ ದೀಕ್ಷೆಗೆ ಹೊರಡಲು ಎದ್ದುನಿಂತನು. ಆಗ ಎಲ್ಲರೂ ಚಿತ್ರದ ಗೊಂಬೆಗಳಂತೆ ಮಾತನಾಡದೆ ಮಿಲಮಿಲನೆ ನೋಡುತ್ತಿದ್ದರು. ಈ ಕೋಮಲಾಂಗನು ದೀಕ್ಷೆಯನ್ನು ಸ್ವೀಕರಿಸದೆ ಮನೆಯಲ್ಲೇ ಇರಬೇಕೆಂದು ಪ್ರತಿಯೊಬ್ಬರೂ ಮನಸ್ಸಿನಲ್ಲಿ ಯೋಚಿಸುತ್ತಿದ್ದರು. ಜಂಬೂಕುಮಾರನು ದೀಕ್ಷೆಗೆ ಹೊರಟೇಬಿಟ್ಟನೆಂಬ ವಾರ್ತೆಯು, ಮಿಂಚಿನಂತೆ, ಪಟ್ಟಣದಲ್ಲೆಲ್ಲ ಕ್ಷಣಕಾಲದಲ್ಲಿ ಹರಡಿತು. ಆಗ ರಾಜನೂ ಪ್ರಜೆಗಳೂ ಓಡಿ ಬಂದರು. ಸ್ತ್ರೀಪುರುಷರ ಸ್ತೋಮವು ಅಪಾರವಾಗಿ ಸೇರಿತು. ಆ ಗುಂಪಿನಲ್ಲಿ ಕೆಲವರು "ಸಂಸಾರಸುಖವು ತೃಣಪ್ರಾಯವೆಂದು ಬಗೆದು ಇದನ್ನು ತೊರೆದು ದೀಕ್ಷೆಗೆ ಹೊರಟಿರುವ ಈ ಜಂಬೂಕುಮಾರನೇ ಧನ್ಯನು" ಎಂದೂ ಇನ್ನು ಕೆಲವರು "ಶಿರೀಷಕುಸುಮದಂತೆ ಸುಕುಮಾರವಾದ ಈ ಕುಮಾರನ ಶರೀರವು ಖಡ್ಗಧಾರೆಯಂತೆ ತೀಕ್ಷ್ಣವಾದ ಜಿನ ದೀಕ್ಷೆಯನ್ನು ಸಹಿಸಬಲ್ಲುದೇ?" ಎಂದೂ ಮತ್ತೆ ಕೆಲವರು "ಅಪಾರವಾದ ಸಂಪತ್ತಿಯುಳ್ಳ ಈ ಅರ್ಹದ್ದಾಸ ಜಿನಮತಿಯರು ಒಬ್ಬನೇ ಮಗ

ನಾಗಿರುವ ಈ ಜಂಬೂಕುಮಾರನನ್ನು ಕಠಿನತಪಕ್ಕೆ ಕಳುಹಿ ಹೇಗೆ ಜೀವಿಸಿರಬಲ್ಲರು ?" ಎಂದೂ ಮಾತನಾಡಿಕೊಳ್ಳುತ್ತಿದ್ದರು. ಹೀಗೆ ಹಲವರು ಹಲವು ಮಾತುಗಳನ್ನಾಡುತ್ತಿದ್ದರು.

ಜಂಬೂಸ್ವಾಮಿಯು ಪ್ರಯಾಣಸನ್ನದ್ಧನಾದುದನ್ನು ನೋಡಿ ಶ್ರೇಣಿಕಮಹಾರಾಜನು ಅವನಿಗೆ ಮಂಗಳಸ್ನಾನವನ್ನು ಮಾಡಿಸಿ ಉತ್ತಮ ವಸ್ತ್ರಾಭರಣಗಳನ್ನೂ ಪಲ್ಲಕ್ಕಿಯನ್ನೂ ತರಿಸಿ ಜಂಬೂಕುಮಾರನನ್ನು ಅಲಂಕರಿಸಿ ಪಲ್ಲಕ್ಕಿಯ ಮೇಲೆ ಕುಳ್ಳಿರಿಸಿ ಒಂದು ಕಡೆಯಲ್ಲಿ ತಾನೂ ಮತ್ತೊಂದು ಕಡೆಯಲ್ಲಿ ಅರ್ಹದ್ದಾಸನೂ ಪಲ್ಲಕ್ಕಿಯನ್ನು ಹೊತ್ತುಕೊಂಡು ವಾದ್ಯವೈಭವದೊಡನೆ ತಪೋವನಕ್ಕೆ ಕರೆದುಕೊಂಡು ಹೋದರು. ಆಗ ಜಂಬೂಕುಮಾರನ ಪತ್ನಿಯರು ಅತ್ಯಂತದುಃಖಿತರಾಗಿ ಹೋಗಿ ಪಲ್ಲಕ್ಕಿಯನ್ನು ಹಿಡಿದು ನಿಲ್ಲಿಸಿ "ನಮಗಾರು ಗತಿ ?" ಎಂದು ಕಲ್ಲೆದೆಯೂ ಕರಗುವಂತೆ ಬಹಳವಾಗಿ ದುಃಖಿಸಿದರು. ಸ್ತ್ರೀಯರ ಆರ್ತಧ್ವನಿಯನ್ನು ಕೇಳಿ ಅವರ ಅವಸ್ಥೆಯನ್ನು ನೋಡಿ ಸ್ವಾಮಿಯು ಪಲ್ಲಕ್ಕಿಯನ್ನು ನಿಲ್ಲಿಸಿ ದಯಾಭಾವದಿಂದ "ಎಲೈ ರಮಣಿಯರೆ! ಸಾವಧಾನದಿಂದ ವಿಚಾರ ಮಾಡಿ. ಈ ಸಂಸಾರದ ಪರಿಸ್ಥಿತಿಯೇನು ? ಅನಾದ್ಯನಂತವಾದ ಈ ಸಂಸಾರದಲ್ಲಿ ಯಾರಿಗೆ ಯಾರು ತಂದೆ? ಯಾರಿಗೆ ಯಾರು ಮಗ? ಯಾರಿಗೆ ಯಾರು ತಾಯಿ? ಯಾರಿಗೆ ಯಾರು ಪತ್ನಿ ? ಇದೆಲ್ಲವೂ ಅನಾದಿಕರ್ಮಪರಂಪರೆಯ ವೈಚಿತ್ರ್ಯ. ಸಂಸಾರಿಜೀವಗಳಿಗೆ ಅನೇಕಜನ್ಮಗಳಲ್ಲಿ ಅನೇಕಸಂಬಂಧಗಳುಂಟಾಗಿವೆ. ಅವುಗಳಿಗೆ ತುದಿ ಮೊದಲೇ ಇಲ್ಲ. ನನ್ನ ಆತ್ಮನು ಅನಾದಿಕಾಲದಿಂದ ಮೋಹನೀಯಕರ್ಮಪರವಶನಾಗಿ ಭವಸಮುದ್ರದಲ್ಲಿ ಅನಂತ ಜನ್ಮ ಮರಣಗಳನ್ನು ಹೊಂದಿದ್ದಾನೆ. ಯಾವ ಜನ್ಮದಲ್ಲಿಯೂ ಈ ಭವಸಮುದ್ರದ ಪಾರವನ್ನು ಹೊಂದಲಾಗಲಿಲ್ಲ. ಇದೊಂದೇ ಉತ್ತಮವಾದ ಜನ್ಮ. ಇದರಲ್ಲಿ ಚತುರ್ಗತಿಗಳೆಂಬ ನಾಲ್ಕು ಬಂಧನಗಳೂ ನಾಶವಾಗುವುವು. ಈಗ

ವಿಘ್ನವನ್ನು ಮಾಡಬೇಡಿ. ಮೋಹಪರವಶರಾಗಿ ನಿಮ್ಮ ಆತ್ಮನಿಗೂ ನನ್ನ ಆತ್ಮನಿಗೂ ಹಾನಿಯನ್ನುಂಟುಮಾಡಬೇಡಿ. ನೀವೂ ಪರಮಗುರುಗಳ ಬಳಿಗೆ ಬಂದು ಪರಾಧೀನವಾದ ಈ ಕರ್ಮಬಂಧನದಿಂದ ಬಿಡುಗಡೆಯನ್ನು ಹೊಂದಿ ಸ್ವಾಧೀನವಾದ ಸುಖವನ್ನು ಹೊಂದುವ ಉಪಾಯವನ್ನು ಕೇಳಿರಿ '' ಎಂದು ಹೇಳಿದನು. ಪಕ್ಕದಲ್ಲಿ ನಿಂತು ದುಃಖಿಸುತ್ತಿದ್ದ ತಾಯಿಗೂ ಸಮಯೋಚಿತವಾಗಿ ಹಿತಬೋಧೆಯನ್ನು ಮಾಡಿದನು.

ಜಂಬೂಕುಮಾರನ ಅಮೃತಸಮಾನವಾದ ಮಾತುಗಳನ್ನು ಕೇಳಿ ಜಿನಮತಿಯು ಮತ್ತು ಆತನ ನಾಲ್ಕು ಮಂದಿ ಪತ್ನಿಯರ ಹೃದಯದಲ್ಲಿ ವಿವೇಕೋದಯವಾಯ್ತು. ಆಗ ಆ ಸ್ತ್ರೀಯರು ಪಲ್ಲಕ್ಕಿಯನ್ನು ಬಿಟ್ಟು ಅವರೂ ಸುಧರ್ಮಾಚಾರ್ಯರು ತಪಸ್ಸನ್ನು ಮಾಡುತ್ತಿದ್ದ ತಪೋವನಕ್ಕೆ ಹೋದರು. ಎಲ್ಲರೂ ಸುಧರ್ಮಾಚಾರ್ಯರಿಗೆ ವಿನಯಪೂರ್ವಕವಾಗಿ ನಮಸ್ಕಾರವನ್ನು ಮಾಡಿ ಯಥೋಚಿತವಾದ ಸ್ಥಾನದಲ್ಲಿ ಕುಳಿತರು. ಸುಧರ್ಮಾಚಾರ್ಯರು " ಸದ್ಧರ್ಮವೃದ್ಧಿರಸ್ತು" ಎಂದು ಆಶೀರ್ವದಿಸಿ ಧರ್ಮೋಪದೇಶವನ್ನು ಮಾಡಿದರು. ಬಳಿಕ ಜಂಬೂಸ್ವಾಮಿಯು ಎದ್ದು ಕೈಜೋಡಿಸಿ ಮುನೀಶ್ವರರನ್ನು ಕುರಿತು " ಪ್ರಭುವೆ ! ಅಗಾಧವೂ ಅಪಾರವೂ ಆದ ಈ ಭವಸಾಗರದಿಂದ ನನಗೆ ಪಾರಗಾಣಿಸಿರಿ '' ಎಂದು ವಿನಯದಿಂದ ಪ್ರಾರ್ಥಿಸಿದನು. ಆಗ ಸುಧರ್ಮಾಚಾರ್ಯರು ಜಂಬೂಸ್ವಾಮಿಗೆ ವಸ್ತ್ರಾಭರಣಗಳನ್ನು ತ್ಯಜಿಸುವಂತೆ ಹೇಳಿದರು. ಅದರಂತೆ ಜಂಬೂಸ್ವಾಮಿಯು ವಸ್ತ್ರಾಭರಣಗಳನ್ನೆಲ್ಲ ತ್ಯಜಿಸಿ ತಲೆಗೂದಲುಗಳನ್ನು, ಕರ್ಮಗಳ ಬೇರುಗಳನ್ನು ಕೀಳುತ್ತಾನೋ ಎಂಬಂತೆ, ಪರಪರನೆ ಕಿತ್ತೊಗೆದನು. ಆಗ ಸುಧರ್ಮಾಚಾರ್ಯರು ಎಲ್ಲರಿಗೂ ಸಂಸಾರಸ್ವರೂಪವನ್ನೂ ಮೋಕ್ಷಸ್ವರೂಪವನ್ನೂ ಕರ್ಮಸ್ವರೂಪವನ್ನೂ ಗೃಹಸ್ಥಧರ್ಮ ಯತಿಧರ್ಮಸ್ವರೂಪವನ್ನೂ ಅಧ್ಯಾತ್ಮವಿಷಯವನ್ನೂ ವಿಶದವಾಗಿ ಉಪದೇಶ ಮಾಡಿ ಜಂಬೂಕುಮಾರನಿಗೆ ವಿಧಿಪೂರ್ವಕವಾಗಿ ಜಿನ

ದೀಕ್ಷೆಯನ್ನು ಕೊಟ್ಟರು. ಆಗಿನ ದೃಶ್ಯವು ವರ್ಣನಾತೀತವಾಗಿತ್ತು. ಎಲ್ಲರ ಹೃದಯದಲ್ಲಿಯೂ ವಿರಕ್ತಿಯು ತಾಂಡವವಾಡುತ್ತಿತ್ತು. ಜಿನ ಮತಿಯೂ ಜಂಬೂಸ್ವಾಮಿಯ ನಾಲ್ಕು ಮಂದಿ ಹೆಂಡತಿಯರೂ ಆ ಮುನೀಶ್ವರರ ಬಳಿಯಲ್ಲಿ ಆರ್ಯಿಕಾವ್ರತಗಳನ್ನು ಸ್ವೀಕರಿಸಿದರು. ವಿದ್ಯು ಚ್ಚರನು ವಿರಕ್ತನಾಗಿ ಸಕಲಪರಿಗ್ರಹಗಳನ್ನು ತ್ಯಜಿಸಿ ಮುನಿದೀಕ್ಷೆಯನ್ನು ಸ್ವೀಕರಿಸಿದನು. ದೊರೆಯೂ ಇತರ ಶ್ರಾವಕ ಶ್ರಾವಿಕೆಯರೂ ಶಕ್ತ್ಯ ನುಸಾರವಾಗಿ ವ್ರತಗಳನ್ನು ಸ್ವೀಕರಿಸಿ ತಂತಮ್ಮ ಸ್ಥಾನಗಳಿಗೆ ಹೊರಟು ಹೋದರು.

ಇತ್ತ ಜಂಬೂಸ್ವಾಮಿಯು ಅನಶನ ಕಾಯಕ್ಲೇಶಾದಿ ಉಗ್ರೋ ಗ್ರತಪಸ್ಸನ್ನೂ ಶಾಸ್ತ್ರಾಧ್ಯಯನವನ್ನೂ ಮಾಡುತ್ತ ಶ್ರುತಕೇವಲಿಯಾಗಿ ಬಳಿಕ ಆತ್ಮಗುಣಘಾತಕಗಳಾದ ಜ್ಞಾನಾವರಣ ದರ್ಶನಾವರಣ ಮೋ ಹನೀಯ ಅಂತರಾಯಗಳೆಂಬ ಘಾತಿಕರ್ಮಗಳನ್ನು ಶುಕ್ಲಧ್ಯಾನದಿಂದ ನಾಶಮಾಡಿ ಜ್ಯೇಷ್ಠ ಶುಕ್ಲ ಸಪ್ತಮಿಯ ದಿವಸ ಕೇವಲಜ್ಞಾನವನ್ನು ಪಡೆದು ಸರ್ವಜ್ಞನಾದನು. ತರುವಾಯ ಅನೇಕದೇಶಗಳಲ್ಲಿ ವಿಹರಿಸಿ ಅನೇಕ ಭವ್ಯಜೀವಗಳಿಗೆ ಧರ್ಮೋಪದೇಶವನ್ನು ಮಾಡುತ್ತಿದ್ದು ಆಯು ಷ್ಯಾವಸಾನದಲ್ಲಿ ಮಥುರಾನಗರದ ಉದ್ಯಾನದಲ್ಲಿ ವ್ಯುಪರತಕ್ರಿಯಾ ನಿವೃತ್ತಿಯೆಂಬ ಪರಮಸಮಾಧಿಯಿಂದ ಅಘಾತಿಕರ್ಮಗಳನ್ನು ನಾಶ ಮಾಡಿ ಮುಕ್ತಿಯನ್ನು ಪಡೆದನು.

ಅರ್ಹದ್ದಾಸಶ್ರೇಷ್ಠಿಯು ಶ್ರಾವಕವ್ರತಗಳನ್ನು ನಿರತಿಚಾರವಾಗಿ ಪಾಲಿಸುತ್ತಿದ್ದು ಆಯುಷ್ಯಾವಸಾನದಲ್ಲಿ ಸನ್ಯಾಸವಿಧಿಯಿಂದ ಮಡಿದು ಬ್ರಹ್ಮೋತ್ತರವೆಂಬ ಆರನೆಯ ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು. ಜಿನಮತಿಯೂ ಪದ್ಮಶ್ರೀ ಮೊಲಾದ ಆ ನಾಲ್ಕು ಮಂದಿ ಸ್ತ್ರೀಯರೂ ತಪಸ್ಸನ್ನು ಮಾಡುತ್ತಿದ್ದು ಆಯುಷ್ಯಾವಸಾನದಲ್ಲಿ ಸನ್ಯಾಸವಿಧಿ ಯಿಂದ ಮಡಿದು ಅದೇ ಆರನೆಯ ಸ್ವರ್ಗದಲ್ಲಿ ದೇವತೆಗಳಾಗಿ ಹುಟ್ಟಿ

ದರು. ಅಲ್ಲಿ ಅವರೆಲ್ಲರ ಸ್ತ್ರೀಪರ್ಯಾಯವು ಹೋಗಿ ಪುರುಷ ಪರ್ಯಾಯವು ಪ್ರಾಪ್ತವಾಯ್ತು.

ಇತ್ತ ವಿದ್ಯುಚ್ಚರಮುನಿಯು ತಪಸ್ಸನ್ನು ಮಾಡುತ್ತಿದ್ದು ಒಂದಾನೊಂದು ದಿವಸ ಮಥುರಾನಗರದ ಸಮೀಪದಲ್ಲಿರುವ ಒಂದು ಉದ್ಯಾನಕ್ಕೆ ಬಂದನು. ಅಲ್ಲಿಗೆ ಒಂದು ವನದೇವತೆಯು ಬಂದು ಮುನಿಯನ್ನು ಕುರಿತು "ಸ್ವಾಮಿಯೆ! ಈ ವನದಲ್ಲಿ ಒಬ್ಬ ದುಷ್ಟ ದಾನವನಿದ್ದಾನೆ. ಅವನು ಈ ವನದಲ್ಲಿ ರಾತ್ರಿಕಾಲದಲ್ಲಿ ವಾಸಮಾಡುವವರಿಗೆ ಬಹಳವಾಗಿ ತೊಂದರೆಯನ್ನುಂಟುಮಾಡುತ್ತಾನೆ. ಆದುದರಿಂದ ತಾವು ಈ ದಿನ ರಾತ್ರಿಕಾಲದಲ್ಲಿ ಈ ವನದಲ್ಲಿ ಧ್ಯಾನಾರೂಢರಾಗದೆ ಬೇರೆ ಕಡೆಗೆ ದಯೆಮಾಡಿರಿ" ಎಂದು ಪ್ರಾರ್ಥಿಸಿತು. ಅದಕ್ಕೆ ವಿದ್ಯುಚ್ಚರ ಮುನಿಯು "ತಪಸ್ಸಿಗೂ ಭಯಕ್ಕೂ ಬಹಳ ದೂರವಿದೆ. ಹೆದರಿಕೆಯಿಂದ ತಪೋನಿಯಮವನ್ನು ಭಂಗಮಾಡಿಕೊಳ್ಳುವವನು ದುರ್ಗತಿಯನ್ನು ಹೊಂದುವನು. ಹೇಡಿಗೆ ಈ ತಪಸ್ಸು ಸಾಧ್ಯವಲ್ಲ. ಈ ದಿವಸ ನಾನು ಇಲ್ಲೇ ಧ್ಯಾನಾರೂಢನಾಗುವೆನೆಂದು ಸಂಕಲ್ಪಿಸಿರುವುದರಿಂದ ಬೇರೆ ಕಡೆಗೆ ಹೋಗುವುದಕ್ಕಾಗುವುದಿಲ್ಲ. ಏನಾಗಬೇಕಾಗಿರುವುದೋ ಅದು ಆಗುವುದು" ಎಂದು ಹೇಳಿ ವಿದ್ಯುಚ್ಚರಮುನಿಯು ಧ್ಯಾನಾರೂಢನಾದನು. ಅರ್ಧ ರಾತ್ರಿಯು ಕಳೆದನಂತರ ಆ ದಾನವನು ಬಂದು ನಾನಾಪ್ರಕಾರವಾದ ಭಯಂಕರರೂಪಗಳನ್ನು ಧರಿಸಿ ನಾನಾ ಉಪಸರ್ಗಗಳನ್ನು ಮಾಡಿದನು. ವಿದ್ಯುಚ್ಚರಮುನಿಯು ಅವಿಚಲಿತನಾಗಿ ಕಷ್ಟಗಳನ್ನು ಸಹಿಸಿದನು. ಕೊನೆಗೆ ಆ ದಾನವನು ಮುನಿಯ ತಪೋದಾರ್ಢ್ಯಕ್ಕೆ ಮೆಚ್ಚಿ ತನ್ನ ನಿಜರೂಪವನ್ನು ತೋರಿ ನಮಸ್ಕರಿಸಿ ಕ್ಷಮೆಯನ್ನು ಪ್ರಾರ್ಥಿಸಿ ಹೊರಟು ಹೋದನು.

ಪ್ರಾತಃಕಾಲವಾದಮೇಲೆ ವಿದ್ಯುಚ್ಚರಮುನಿಯು ತನ್ನ ಧ್ಯಾನ-ಯೋಗವನ್ನು ಉಪಸಂಹರಿಸಿದನು. ಆಗ ಪುರನಿವಾಸಿಗಳು ಬಂದು ನಾನಾಪ್ರಕಾರವಾಗಿ ಸ್ತುತಿಸಿ ನಮಸ್ಕರಿಸಿ ಧರ್ಮೋಪದೇಶವನ್ನು ಕೇಳಿ

ತಂತಮ್ಮ ಮನೆಗಳಿಗೆ ಹೊರಟುಹೋದರು. ಬಳಿಕ ವಿದ್ಯುಚ್ಚರಮುನಿಯು ಬಹುದಿನಗಳ ವರೆಗೆ ಉಗ್ರೋಗ್ರತಪಸ್ಸನ್ನು ಮಾಡುತ್ತಿದ್ದು ಆಯು ಷ್ಯಾವಸಾನದಲ್ಲಿ ಸಮಾಧಿವಿಧಿಯಿಂದ ಮಡಿದು ಸರ್ವಾರ್ಥಸಿದ್ಧಿಯೆಂಬ ಸ್ವರ್ಗ—ವಿಮಾನದಲ್ಲಿ ಅಹಮಿಂದ್ರನಾಗಿ ಜನಿಸಿದನು. ಅಲ್ಲಿ ಮೂವತ್ತಮೂರು ಸಾಗರೋಪಮಕಾಲದ ವರೆಗೆ ಅನುಪಮಸುಖವನ್ನ ನುಭವಿಸಿ ಬಂದು ಮನುಷ್ಯಭವದಲ್ಲಿ ಉತ್ತಮಕುಲದಲ್ಲಿ ಜನಿಸಿ ಮುನಿ ಯಾಗಿ ಉಗ್ರೋಗ್ರತಪಸ್ಸನ್ನು ಮಾಡಿ ಪರಮಶುಕ್ಲಧ್ಯಾನದಿಂದ ಸಮಸ್ತ ಕರ್ಮಗಳನ್ನು ನಾಶಮಾಡಿ ಮೋಕ್ಷವನ್ನು ಪಡೆಯುವನು ″ ಈ ಪ್ರಕಾ ರವಾಗಿ ಗೌತಮಗಣಧರರು ಅಪ್ಪಣೆಕೊಡಿಸಿದುದನ್ನು ಕೇಳಿ ಶ್ರೇಣಿಕ ಮಹಾಮಂಡಲೇಶ್ವರನೂ ಸಭಿಕರೂ ಸಂತುಷ್ಟರಾಗಿ ತಂತಮ್ಮ ಸ್ಥಾನಗ ಳಿಗೆ ತೆರಳಿದರು. (ಜಂಬೂಸ್ವಾಮಿಯು 'ಮುಕ್ತರಾದರು' ಇತ್ಯಾದಿ ಭೂತಕಾಲಪ್ರಯೋಗವು ಈ ಗ್ರಂಥಲೇಖಕನ ಲೇಖನಕಾಲಾಪೇಕ್ಷೆಯಿಂ ದಲ್ಲದೆ ಗೌತಮಗಣಧರರ ಕಾಲಾಪೇಕ್ಷೆಯಿಂದಲ್ಲವೆಂಬುದನ್ನು ವಾಚ ಕರು ಲಕ್ಷ್ಯದಲ್ಲಿಡಬೇಕು.)

## ಉಪಸಂಹಾರ

ಮಿಥ್ಯಾದೃಷ್ಟಿಗಳಾಗಿದ್ದ ಆ ಭಾವದೇವ ಭವದೇವಸಹೋದರರು ಯಾವ ಧರ್ಮವನ್ನು ಅವಲಂಬಿಸಿ ಅದರ ಪ್ರಭಾವದಿಂದ ಉತ್ತರೋತ್ತರ ಆತ್ಮೋನ್ನತಿಯನ್ನು ಹೊಂದಿ ಮೊದಲನೆಯ ಭಾವದೇವನು ಶ್ರೀ ಜಂಬೂ ಸ್ವಾಮಿಕೇವಲಿಯಾಗಿ ಲೋಕಪೂಜ್ಯನಾಗಿ ಮುಕ್ತಿಸಾಮ್ರಾಜ್ಯಕ್ಕೆ ಅಧಿ ಪತಿಯಾದನೋ ಎರಡನೆಯ ಭವದೇವನು ವಿದ್ಯುಚ್ಚರಮುನಿಯಾಗಿ ಲೋ ಕಪೂಜ್ಯನಾಗಿ ಮುಂದೆ ಕೈವಲ್ಯವನ್ನು ಪಡೆಯುವನಾಗಿರುವನೋ ಅಂತಹ ಪರಮಪವಿತ್ರ ಜೈನಧರ್ಮವನ್ನು ಆತ್ಮೋನ್ನತಿಕಾಂಕ್ಷಿಗಳೆಲ್ಲರೂ ಪರಿಪಾ ಲಿಸಿ ಶಾಶ್ವತವಾದ ಕೈವಲ್ಯಸುಖಕ್ಕೆ ಪಾತ್ರರಾಗಬೇಕೆಂಬುದೇ ಈ ಆದ ರ್ಶಪುಣ್ಯಚರಿತ್ರಲೇಖನದ ಮತ್ತು ಪ್ರಕಾಶನದ ಉದ್ದೇಶವಾಗಿರುತ್ತದೆ.

|| ಇತಿ ಜೀಯಾಜ್ಜಿನಶಾಸನಂ ||